# ಲಲಿತ ಸಾಹಿತ್ಯ ಮಾಲೆ, ಧಾರವಾಡ

ವರುಷಕ್ಕೆ ಆರುನೂರು ಪುಟದ ಸಾಹಿತ್ಯ

**ಚಂದಾ: ೫ ರೂ. ರಜಿಸ್ಟರ ಅಂಚೆಯಿಂದ ೬ ರೂ.**

ಇದುವರೆಗಿನ ಪ್ರಕಟನೆಗಳು

## ಮೊದಲನೆಯ ವರುಷ

| | | | | |
|---|---|---|---|---|
| ಚಿಗುರು | ದಿ॥ ಸೌ. ಗೌರಮ್ಮ | | ತೀರಿವೆ | |
| ಅಕ್ಕಾಜಿ | ಶರಚ್ಚಂದ್ರ | ೧ | ೪ | ೦ |
| ಕುಲದೀಪಕರು | ಸಿದ್ಧವನಹಳ್ಳಿ | | ತೀರಿವೆ | |
| ಸಾಹಿತ್ಯರತ್ನ | ಅ. ನ. ಕೃಷ್ಣರಾಯ | ೩ | ೮ | ೦ |

## ಎರಡನೆಯ ವರುಷ

| | | | | |
|---|---|---|---|---|
| ಮುದ್ದಿನ ಕಣಿ [ ಚೆಕ್ಹೊವ್ ] | ಚುಳಕಿ | ೧ | ೦ | ೦ |
| ಸುಮತಿ ಮತ್ತು ಅನುರಾಧಾ | ಶರಚ್ಚಂದ್ರ | ೧ | ೪ | ೦ |
| ಡೊಂಕುಬಾಲ | ನಾ. ಕಸ್ತೂರಿ | ೧ | ೮ | ೦ |
| ಕಸ್ತೂರಿ | ಶ್ರೀಮತಿ 'ವಾಣಿ' | ೧ | ೪ | ೦ |
| ಶೈಲಾಜಿ | ವಿವಿಧ ಏಕಾಂಕಗಳು | | ಅಚ್ಚಿನಲ್ಲಿ | |
| ಇಂದಿನ ಕರ್ನಾಟಕ | ಸಂಪಾದಕರು ಪ್ರೊ. ಗೋಕಾಕ | | ,, | |

**ಮನೋಹರ ಗ್ರಂಥಭಾಂಡಾರ, ಧಾರವಾಡ**

**ಕನ್ನಡ ಪುಸ್ತಕಾಲಯ, ಬೆಳಗಾಂವಿ**

ಲಲಿತ ಸಾಹಿತ್ಯಮಾಲೆಯ ೧೧ನೆಯ ಕುಡಿ

# ಕಸ್ತೂರಿ

( ಕತೆಗಳು )

ಶ್ರೀ. ಮಾಸ್ತಿಯವರ ಮುನ್ನುಡಿಯೊಂದಿಗೆ

ಶ್ರೀಮತಿ ' ವಾಣಿ '

ಲಲಿತಸಾಹಿತ್ಯಮಾಲೆ
ಧಾರವಾಡ

ಅಕ್ಟೋಬರ ೧೯೪೪ ಬೆಲೆ ೧—೪—೦

ಸಂಪಾದಕರು

ಚುಳಕಿ ಗೋವಿಂದರಾಯರು

ಮಾರಾಟಗಾರರು :

ಮನೋಹರ ಗ್ರಂಥ ಭಾಂಡಾರ, ಧಾರವಾಡ

ಕನ್ನಡ ಪುಸ್ತಕಾಲಯ, ಬೆಳಗಾಂವಿ



ಲಲಿತಸಾಹಿತ್ಯ ಮಾಲೆಯ ೧೧ನೆಯ ಕುಡಿ

# ' ಶೈಲಾಜಿ '

## ವಿವಿಧ ಏಕಾಂಕಗಳು

ಹೆಸರಾಂತ ನಾಟಕಕಾರರಿಂದ-

ಪ್ರಕಾಶಕರು :
ದ. ಬಾ. ಕುಲಕರ್ಣಿ
ಮನೋಹರ ಗ್ರಂಥ ಭಾಂಡಾರ
ಧಾರವಾಡ

ಮುದ್ರಕರು :
ಜಿ. ಆರ್. ಪಂಡಿತ
ಕೇಳಕರ ಪ್ರೆಸ್,
ಧಾರವಾಡ

# ಮುನ್ನುಡಿ

ತಾಯಿ ಸೌಭಾಗ್ಯವತಿ ಸುಬ್ಬಮ್ಮನವರು ತಮ್ಮ ಈ ಕಥಾಸಂಗ್ರಹಕ್ಕೆ ಒಂದು ಮುನ್ನುಡಿ ಬರೆದುಕೊಡಬೇಕೆಂದು ನನ್ನನ್ನು ಕೇಳಿದಾರೆ. ಗ್ರಂಥಗಳಿಗೆ ಮುನ್ನುಡಿಯಿರುವುದು ಈಚೆಗೆ ನಮ್ಮಲ್ಲಿ ಹಿರಿಯರಿಗೆ ಗೆಳೆಯರಿಗೆ ಬೇಸರಕ್ಕೆ ಕಾರಣವಾಗಿದೆಯೆಂದು ಕಾಣುತ್ತದೆ. ಆದರೂ ತರುಣ ಲೇಖಕ—ಲೇಖಕಿಯರು ಮುನ್ನುಡಿ ಬರೆಯಬೇಕೆಂದು ನನ್ನನ್ನು ಕೇಳಿದಾಗ ಒಲ್ಲೆನೆಂದು ಹೇಳುವುದು ನನ್ನಿಂದಾಗಿಲ್ಲ. ಆದುದರಿಂದ ಸೌಭಾಗ್ಯವತಿ ಸುಬ್ಬಮ್ಮನವರ ಇಷ್ಟದಂತೆ ಈ ನಾಲ್ಕು ಮಾತನ್ನು ಬರೆಯುತ್ತಿದೇನೆ.

ಈಗ ಎರಡು ಮೂರು ವರ್ಷದ ಮುಂದೆ ಪತ್ರಿಕೆಗಳಲ್ಲಿ ಒಂದೆರಡು ಕಡೆ "ವಾಣಿ" ಎಂಬ ಕಾವ್ಯನಾಮದಿಂದ ಪ್ರಕಟವಾದ ಲೇಖನಗಳು ನನಗೆ ಕಂಡವು. ಬರಹ ಮಹಿಳೆಯರದೆಂದು ಸ್ಪಷ್ಟವಷ್ಟೆ. ಬರವಣಿಗೆಯಲ್ಲಿ ಒಂದು ಸೊಗಸು ಇತ್ತು. ನಮ್ಮಲ್ಲಿ ಹೆಣ್ಣುಮಕ್ಕಳು ಹೆಚ್ಚುಹೆಚ್ಚಾಗಿ ಬರಹವಲ್ಲಿ ತೊಡಗಬೇಕೆಂದು ನನ್ನ ಅಭಿಪ್ರಾಯ. ಇದನ್ನು ನಾನು ಈ ಮೊದಲು ಇನ್ನೊಂದು ಸಂದರ್ಭವಲ್ಲಿ ವಿಶದವಾಗಿ ಹೇಳಿದೇನೆ. ಈ ಹೊಸ ಲೇಖನವನ್ನು ನೋಡಿದಾಗ ನನಗೆ ತುಂಬಾ ಸಂತೋಷವಾಯಿತು. ಇದಾದ ಕೆಲವು ದಿನದಲ್ಲಿ ಮೈಸೂರಿನಲ್ಲಿ ಭಗಿನಿ ಶ್ರೀಮತಿ ಅಮೃತಾಬಾಯಿ ಇವರ ಸಮಾಜವಲ್ಲಿ ನಾನು ಭಾಷಣ ಮಾಡಿದ ಸಂದರ್ಭದಲ್ಲಿ ಸಭಿಕರಲ್ಲೊಬ್ಬರು ಎದ್ದು ನನಗೆ ಉಪಚಾರ ವಂದನೆಯನ್ನು ಹೇಳಿದರು. ಎಳೆಯ ವಯಸ್ಸಿನ ಹೆಣ್ಣಾದರೂ ಆಕೆ ದಿಟ್ಟವಾಗಿ ಮಾತನಾಡಿದರು; ಪದಗಳಿಗಾಗಿ ಹಿಂದುಮುಂದು ನೋಡಲಿಲ್ಲ; ಉಕ್ತಿಯ ರೀತಿ ಮೆಚ್ಚುವಂತಿತ್ತು. ಸಭೆ ಮುಗಿದ ಮೇಲೆ ಅವರು "ವಾಣಿ" ಎಂಬ ಹೆಸರಿನಿಂದ ಬರೆಯುತ್ತಿರುವ ಲೇಖಕಿ ಎಂದೂ ನಮ್ಮ ಹಿರಿಯರಾದ ಶ್ರೀಮಾನ್ ಬಿ. ನರಸಿಂಗರಾಯರ ಮಗಳು ಎಂದೂ ಪರಿಚಯವಾಯಿತು. ಇದರೀಚೆಗೆ ಇವರ ಬರಹ ಇನ್ನೂ ಬೇರೆ ಬೇರೆ ಕಡೆ ಪ್ರಕಟವಾಗುತ್ತಿರುವುದನ್ನು ನೋಡಿ ನಾನು ಸಂತೋಷಪಟ್ಟೆನು.

ಶ್ರೀಮಾನ್ ನರಸಿಂಗರಾಯರು ವಕೀಲಿಯಲ್ಲಿ ಹೆಸರಾಂತರು. ಆ ತಲೆಮಾರಿನಲ್ಲಿ ಇಂಥವರಿಗೆ ಪುಸ್ತಕರಚನೆಯ ಚಪಲಗಳಿರಲಿಲ್ಲ. ಹಾಗಲ್ಲದಿದ್ದರೆ

ಶ್ರೀಯುತರು ಎಂತೆಂತ ಕತೆಗಳನ್ನು ಬರೆಯಬಹುದಾಗಿತ್ತೊ ಹೇಳುವಂತಿಲ್ಲ. ಏಕೆಂದರೆ ಅವರು ದಿನದ ಜೀವನದಲ್ಲಿ ಅಷ್ಟು ಸ್ವಾರಸ್ಯವಾಗಿ ಮಾತನಾಡುತ್ತಿದ್ದರು ತಂದೆಯಲ್ಲಿದ್ದು ಗ್ರಂಥರೂಪವನ್ನು ಪಡೆಯದೆ ಮರೆತ ಶಕ್ತಿ ಈಗ ಸೌ|| ಸುಬ್ಬಮ್ಮನವರಲ್ಲಿ ಆ ರೂಪಕ್ಕೆ ಬಂದಿರುವುದು ಸಹಜವಾಗಿದೆ. ಇದು ಒಂದು ರೀತಿಯಲ್ಲಿ ಜನಕ್ಕೆ ಉತ್ತೇಜನವಾಗಬೇಕು. ಐವತ್ತು ವರುಷದ ಹಿಂದೆ ವಿದ್ಯಾಪಾರುಗತರಾದ ಗಂಡಸರೂ ಪುಸ್ತಕ ಬರೆಯುವ ಯೋಚನೆ ಮಾಡುತ್ತಿರಲಿಲ್ಲ. ಕನ್ನಡ ಬರೆಯುವುದು ಮರ್ಯಾದೆಗೆ ಕಡಮೆಯೆಂತಲೋ, ಬರೆದು ಆಗುವುದೇನೆಂತಲೋ, ಬರೆದರೆ ಏನಾಗುತ್ತದೋ ಎಂತಲೋ, ಆಗಿನ ಜನರು ಮೌನದಲ್ಲಿರುತ್ತಿದ್ದರು. ಈಗ ವಿದ್ಯೆಯಪಾರ ಬಹುದೂರವೆಂದು ತಿಳಿದ ಸಮ್ಪ್ರಂಧವರೂ ಇಂಥ ಅಭಿಮಾನ ತಿರಸ್ಕಾರ ಸಂಕೋಚಗಳನ್ನು ಒತ್ತಟ್ಟಿಗಿಟ್ಟು ಏನಾದರೂ ಬರೆಯಬೇಕೆಂದು ತೋರಿದ ವೇಳೆ ಬರೆದು ಹೊರಕ್ಕೆ ತರುತ್ತೇವೆ. ಜನತೆಯ ಬೆಳೆವಣಿಗೆಗೆ ಇದು ತೀರಾ ಅವಶ್ಯಕರ್ಮ. ಇದು ಇನ್ನೂ ಸಾಕಾದಷ್ಟು ಆಗುತ್ತಿಲ್ಲ. ಆದರೆ ಎಷ್ಟಾದರೂ ಆಗುತ್ತಿದೆಯಲ್ಲ ಅದೇ ಒಂದು ಸಂತೋಷ, ಶುಭಚಿಹ್ನೆ. ಆದರಲ್ಲಿಯೂ ನಮ್ಮ ಹೆಣ್ಣುಮಕ್ಕಳು ಲೇಖನದಲ್ಲಿ ಕೈಹಾಕುವುದು ಮೆಚ್ಚಿಕೊಳ್ಳಬೇಕಾದ ವಿಷಯ.

ಸೌಭಾಗ್ಯವತಿ ಸುಬ್ಬಮ್ಮನವರ ಈ ಕತೆಗಳು ನಮ್ಮ ಹೆಣ್ಣುಮಕ್ಕಳ ಲೇಖನ ಒಂದು ಹಂತಕ್ಕೆ ಬಂದಿದೆಯೆಂಬುದನ್ನು ಸೂಚಿಸುತ್ತದೆ. ಇವರು ಹಲವಾರು ವಸ್ತುಗಳನ್ನು ತೆಗೆದುಕೊಂಡು ಸಣ್ಣಕತೆ ಬರೆದಿದಾರೆ. ಕತೆಗಳಲ್ಲಿ ತಮ್ಮ ಭಾವನೆಗೆ ರೂಪುಕೊಡಲು ತೊಡಗಿದಾರೆ. ನಡತೆ, ಸಂಗತಿ ಅಲ್ಲಲ್ಲಿ ವಾಡಿಕೆಯದಲ್ಲವೆಂಬಂತೆ ಕಾಣಬಹುದು. ಆದರೆ ಆ ವಿಷಯವನ್ನು ಅವರೂ ಯೋಚಿಸಿದಾರೆ. ವಾಡಿಕೆಯದು ಅಲ್ಲದಿದ್ದರೂ ಅಸ್ವಭಾವಿಕವಲ್ಲ ಎಂದು ನಿರ್ಧರಿಸಿಕೊಂಡಿದಾರೆ. ಎಂದರೆ ಇವರು ಬರೆಯುವ ವೇಳೆ ಹೀಗಾದರೆ ಹೇಗೆ, ಹಾಗಾದರೆ ಹೇಗೆ ಎಂದು ತಹತಹಪಡುತ್ತ ಬರಹವನ್ನು ನಿಲ್ಲಿಸುವರೂ ಅಲ್ಲ; ಅಥವಾ ಕೈಗೆ ಬಂದದ್ದನ್ನು ಬರೆಯುತ್ತ ಬರೆದದ್ದೇ ಸರಿ ಎನ್ನುವರೂ ಅಲ್ಲ. ಇವರ ಸಹಜವಾದ ಲೇಖನಶಕ್ತಿಯಲ್ಲಿ ಧಾರಾಳದೊಂದಿಗೆ ವಿವೇಚನೆ ಸೇರಿಕೊಂಡಿದೆ. ಈ ಕತೆಗಳು ಕಾಲಕ್ರಮವಾಗಿ ಐದಾರು ವರುಷಗಳಲ್ಲಿ ಬರೆದವು. ಅವುಗಳಲ್ಲಿ ಕಥನಕ್ರಮ, ಶಬ್ದಕೋಶ, ಭಾಷಾಸರಣಿ ಬರಬರುತ್ತಾ

ಪರಿಷ್ಕಾರವಾಗಿರುವುದು ಕಾಣುತ್ತದೆ. ಎಲ್ಲವೂ ಒಂದು ಹದಕ್ಕೆ ಬಂದಿರುವ ಕತೆ ಉತ್ತಮಸಾಹಿತ್ಯವಾಗಿದೆ. ಇನ್ನು ಮುಂದೆ ಇವರು ಬರೆಯುವ ಕತೆ ಹೀಗೆ ಅಥವಾ ಇದಕ್ಕೂ ಚೆನ್ನಾಗಿ ಬರಬೇಕು. ಇಂಥ ಕತೆ ಇವರಿಂದ ಹತ್ತಾರು ಬರಲಿ; ನಮ್ಮ ಸಾಹಿತ್ಯಭಂಡಾರಕ್ಕೆ ರತ್ನಗಳಾಗಿ ಸೇರಲಿ.

ಬೆಂಗಳೂರು
ಚಿತ್ರಭಾನು ಸಂ. ಪುಷ್ಯ ಶು. ಸಪ್ತಮಿ

ಶ್ರೀನಿವಾಸ

## ಅರಿಕೆ

ಶ್ರೀಮತಿ 'ವಾಣಿ'ಯವರು ಬರೆದ ಸಣ್ಣಕತೆಗಳ ಸಂಗ್ರಹವೇ ಈ "**ಕಸ್ತೂರಿ**"ಯು. ಶ್ರೀಮತಿ 'ವಾಣಿ'ಯವರು ಸಣ್ಣಕತೆ ಬರೆಯುವ ಸ್ತ್ರೀ ಬರೆಹಗಾರರಲ್ಲಿ ಬಲ್ಲಿದರೆಂದು ಹೇಳಬಹುದು. ಇವರ ಹಲವು ಕತೆಗಳು ಸ್ಪರ್ಧೆಯಲ್ಲಿ ಮೊದಲನೆಯವಾಗಿ ಆರಿಸಲ್ಪಟ್ಟು ಮೆಚ್ಚುಗೆಗಳನ್ನು ಪಡೆದಿವೆ. ಇವರ ಕಥಾಸಂಗ್ರಹವನ್ನು ನಾವು ಪ್ರಸಿದ್ಧಿಸಬೇಕೆಂದು ಹವ್ಯಾಸಪಡುತ್ತಿದ್ದು ಬಹಳ ದಿನಗಳಾದವು. ಆ ಯೋಗವು ಈಗ ಒದಗಿ ಬಂದುದಕ್ಕಾಗಿ ನಮಗೆ ಹರುಷವಾಗುತ್ತದೆ. ತಮ್ಮ ಕತೆಗಳನ್ನು ನಮ್ಮ ಈ ಲಲಿತಸಾಹಿತ್ಯ ಮಾಲೆಯಲ್ಲಿ ಪ್ರಕಟಿಸಲು ಅನುಮತಿಯನ್ನಿತ್ತ ಕತೆಗಾರ್ತಿಯರಾದ ಶ್ರೀಮತಿ 'ವಾಣಿ'ಯವರಿಗೆ ನಾವು ತುಂಬಾ ಉಪಕೃತರಾಗಿರುವೆವು. ಅದರಂತೆ ಮುನ್ನುಡಿಯನ್ನು ದಯಪಾಲಿಸಿದ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರರಿಗೂ ಋಣಿಯಾಗಿದ್ದೇವೆ.

ಶ್ರೀಮತಿ 'ವಾಣಿ'ಯವರ ಇನ್ನು ಕೆಲವು ಕತೆಗಳನ್ನು ಈ ಸಂಗ್ರಹದಲ್ಲಿ ಸೇರಿಸಬೇಕೆಂದು ಮಾಡಿದ್ದೆವು. ಆದರೆ ಕಾಗದದ ಅಭಾವದ ಮೂಲಕ ಬಿಡಬೇಕಾದುದಕ್ಕೆ ವಿಷಾದಪಡುತ್ತೇವೆ.

ಅಲ್ಪಕಾಲದಲ್ಲಿ ಮುದ್ರಿಸಿಕೊಟ್ಟುದಕ್ಕಾಗಿ ಕೇಳಕರ ಪ್ರೆಸ್ಸಿನ ಶ್ರೀ. ಜಿ. ಆರ್. ಪಂಡಿತ ಇವರಿಗೆ ವಂದನೆಗಳು.

**ಸಂಪಾದಕರು**

# ಮುಡಿಪು

ಕಸ್ತುರಿಯ ಕಂಪೆಲ್ಲಿ ಪೋಪುದು?
ಕಾಣದಿದ್ದರು ನೋಟಕೆ!
ನಿನ್ನ ಮೂರುತಿ ಕಾಣದಾದರು;
ನೆನಪು ಉಳಿಯದೆ? ಅಳಿವುದೆ!
ನಿನ್ನ ಪ್ರೇಮದ ಸವಿಯ ನೆನಪಿಗೆ
ಮುಡಿಪು ಈ ಸುಮ ಸೋದರ!


| | ವಿವರ | ಪುಟ |
|---|---|---|
| ೧ | ಮುರಲಿ | ೧ |
| ೨ | ಕಡೆಯ ದಿನ | ೧೩ |
| ೩ | ತುಂಗಭದ್ರ | ೩೨ |
| ೪ | ತಾಯಿ | ೪೯ |
| ೫ | ಪಯಣ | ೬೧ |
| ೬ | ಅರವಿಂದ | ೭೧ |
| ೭ | ಎರಡು ಚಿತ್ರ | ೮೪ |

# ಮುರಲಿ

ಅವನೊಬ್ಬ ಕಲಾವಿದ. ಪ್ರಕೃತಿಯು ಕೊಟ್ಟ ಅಮರಕಂಠದಿಂದ ಕೋಗಿಲೆಯಂತೆ ಸ್ವಚ್ಛಂದದಿಂದ ಹಾಡುವ ಗಾಯಕ! ಅವನು 'ಪತಿತ'ನೆಂದು ಸುದ್ದಿಯು ಹರಡಿದಾಗ ಪ್ರಶಾಂತವಾದ ಸಾಗರದಲ್ಲಿ ಬಿರುಗಾಳಿ ಎದ್ದಂತೆ ಜನರ ಮನಸ್ಸು ಅಲ್ಲೋಲ ಕಲ್ಲೋಲವಾಯಿತು.

ಅವನು ಅಧಿಕಾರಿಯಲ್ಲ, ಐಶ್ವರ್ಯವಂತನಂತೂ ಮೊದಲೇ ಅಲ್ಲ! ಜನ ಅವನ ತಪ್ಪನ್ನು ಮರೆಮಾಡುವುದೆಂತು? ಅವನೊಬ್ಬ ಅನಾಥ, ಬಡವ. ಅವನಲ್ಲಿದ್ದ ಅಮೌಲ್ಯವಾದ ಸಂಪತ್ತೆಂದರೆ— ಅವನ ದೇವದತ್ತವಾದ ಕಂಠ! ಅವನು ಆ ಊರಿಗೆ ಬಂದಾಗ ಅವನಿಗೆ ಹತ್ತು ಹನ್ನೆರಡು ವರುಷವಿರಬಹುದು. ಹುಡುಗ ಬೀದಿಯಲ್ಲಿ ಹಾಡುತ್ತ ಭಿಕ್ಷೆಗೆ ಬಂದರೆ, ಜನರು ತಮ್ಮ ಕೆಲಸವನ್ನು ಬಿಟ್ಟು, ಗುಂಪಾಗಿ ಬೀದಿಯಲ್ಲಿ ನೆರೆಯುತ್ತಿದ್ದರು. ಎರಡು ಬೀದಿಗೆ ಹೋಗುವುದರೊಳಗೆ ಜೋಳಿಗೆಯು ತುಂಬಿ ಅದರ ಭಾರವು ಹುಡುಗನನ್ನು ಜಗ್ಗುವಂತೆ ಕಾಣುತ್ತಿತ್ತು. ಅವನ ಮಧುರವಾದ ಕಂಠದ ಜೊತೆಗೆ ತಬ್ಬಲಿತನದ ಕರುಣಾಜನಕ ಕಥೆಯೂ ಸೇರಿ ಜನರನ್ನು ಹೆಚ್ಚು ಆಕರ್ಷಿಸುತ್ತಿತ್ತು. ಅವನಿಗೆ ಅದು ಎಂಟು ಹತ್ತು ದಿವಸಗಳ ಗ್ರಾಸ. ಒಬ್ಬನೇ ಹುಡುಗ. ಎಷ್ಟು ತಾನೇ ತಿಂದಾನು? ಅಷ್ಟು ಅಕ್ಕಿಯೂ ಮುಗಿಯುವವರೆಗೆ ಪುನಃ ಬೀದಿಗೆ ತಲೆಹಾಕುತ್ತಿರಲಿಲ್ಲ.

ಊರನ್ನು ಬಳಸಿ ಹರಿಯುವ ನದಿ. ಅದರ ಸಮೀಪದಲ್ಲಿ ಒಂದು ಮಂಟಪ. ಹೊಟ್ಟೆಯ ಕಾಲಕ್ಷೇಪ ಕಳೆದಮೇಲೆ ಹುಡುಗನು ನದಿಯ ಮರಳಲ್ಲಿ

ಕುಳಿತು ಹಕ್ಕಿಗಳ ಧ್ವನಿಯೊಡನೆ ತನ್ನ ಧ್ವನಿಯನ್ನು ಬೆರಸಿ ಆನಂದದಿಂದ ಹಾಡುತ್ತಿದ್ದ. ಕೆಲವು ವೇಳೆ ಹಾಡುವಾಗ ತನ್ನ ಹಿಂದಿನ ಬಾಳಿನ ನೆನಪಾಗಿ ಮೌನವಾಗಿ ಉರುಳಿಬಂದ ಕಣ್ಣೀರು ನದಿಯ ಮರಳಿನಲ್ಲಿ ಮರೆಯಾಗುತ್ತಿತ್ತು. ರಾತ್ರಿಯ ಮೌನವು ಹೆಚ್ಚುತ್ತ ಬಂದಹಾಗೆ ಹುಡುಗನ ಕಣ್ಣುಗಳು ಕಿರಿದಾಗಿ ದೇಹವು ಆಯಾಸದಿಂದ ವಿಶ್ರಾಂತಿಯನ್ನು ಬಯಸಿದಾಗ-- ಹುಡುಗನು ಎದ್ದು ಮಂಟಪದೊಳಗೆ ಹೋಗಿ ಮಲಗುತ್ತಿದ್ದನು. ಬೆಳಗಿನ ಝಾವದಲ್ಲಿ ಹಕ್ಕಿಗಳು ಉದಯರಾಗವನ್ನು ಹಾಡುತ್ತಿರುವಾಗಲೇ ಹುಡುಗನು ಕಣ್ಣರಳಿಸಿ, ಮೈ ಮುರಿದು ಹೊರಗೆ ಬರುತ್ತಿದ್ದನು.

ಹುಡುಗನು ದೊಡ್ಡವನಾದ. ಅವನ ಜೀವನದ ರೀತಿಯೂ ಬದಲಾಯಿಸಿತು. ಅವನು ಮೊದಲಿನಂತೆ ಜೋಳಿಗೆ ಹಿಡದು ಭಿಕ್ಷೆಗೆ ಹೋಗಬೇಕಾಗಿರಲಿಲ್ಲ. ಸ್ನಾನಕ್ಕಾಗಿ ಬಂದವರು ಏನಾದರೂ ತೆಗೆದುಕೊಂಡುಬಂದು ಅವನಿದ್ದ ಕಡೆಗೇ ಹೋಗಿ ಕೊಡುತ್ತಿದ್ದರು. ಯಾರೂ ಇಲ್ಲದೆ ತಬ್ಬಲಿಯಾಗಿ ಬಂದವನು ಈಗ ಎಲ್ಲರ ಮನೆಯವನೂ ಆದ. ಒಬ್ಬರ ಮನೆಯಲ್ಲಿ ಊಟವಾದರೆ ಮತ್ತೊಬ್ಬರ ಮನೆಯಲ್ಲಿ ನೀರು ಹಾಕಿಕೊಳ್ಳುವುದು! ಒಬ್ಬರು ಓದುವುದಕ್ಕೆ ಸಹಾಯ ಮಾಡಿದರೆ ಮತ್ತೊಬ್ಬರಿಂದ ಅವನಲ್ಲಿ ಅಡಗಿದ್ದ ಗಾನಕಲೆಯು ಅಭಿವೃದ್ಧಿಯಾಗಲು ಸಹಾಯ! ಹೀಗೆ ಹತ್ತು ಜನದ ಆರೈಕೆಯಿಂದ ಅನೇಕ ಜನರ ಬೆಂಬಲದಿಂದ ಅವನ ಬಾಳು ನಡೆಯುತ್ತಿತ್ತು. ಹಗಲನ್ನು ಎಲ್ಲಿ ಹೇಗೇ ಕಳೆದರೂ ರಾತ್ರಿಯಾದ ಕೂಡಲೇ ತಾಯಿಯನ್ನು ನೆನೆದು ಹುಡುಕಿಕೊಂಡು ಬರುವ ಮರಿಯಂತೆ, ಮಂಟಪಕ್ಕೆ ಬಂದು ಒಂದು ಗಳಿಗೆ ಮಾನವ ಪ್ರಪಂಚವನ್ನು ಮರೆತು, ಹಕ್ಕಿಯೊಡನೆ ಹಾಡಿ, ನದಿಯೊಡನೆ ನಲಿದು— ಬೆಳಗಿನ ಆಯಾಸವನ್ನು ಪರಿಹರಿಸಿಕೊಳ್ಳುತ್ತಿದ್ದನು.

ಆದರೆ ಈ ಬಗೆಯ ಬಾಳು ಎಷ್ಟು ದಿನ ಸಾಗೀತು? ಯಾವ ಬಗೆಯ ನಿರ್ಬಂಧವೂ ಇಲ್ಲದೆ ಪ್ರಕೃತಿಮಾತೆಯ ಮಗುವಾಗಿ ಬೆಳೆದವನಿಗೆ ಅಷ್ಟು ಜನರ ವಿಶ್ವಾಸವೂ ದಯೆಯೂ ಹೊರೆಯಾಗಿ ತೋರಿದುವು. ಸ್ವಲ್ಪ ಸ್ವಲ್ಪವಾಗಿ ಅವನು ಇತರರ ಕಷ್ಟಸುಖಗಳಲ್ಲಿ, ಮೋಹ ಮರುಕಗಳಲ್ಲಿ ಅರಿವಿಲ್ಲದಂತೆಯೇ ಭಾಗಿಯಾಗುತ್ತ ಬಂದ. ಇಷ್ಟು ಜನರ ಮಮತೆಯ ಬಂಧನದೊಳಗೆ ಶಿಲುಕಿ ಎಲ್ಲಿ 'ತಾನು' ಎಂಬುದೆ ಮರೆಯಾಗುತ್ತೋ--ಎಂದು ಹೆದರು

ವಷ್ಟು ಮಾರ್ಪಾಟು ಆಗುತ್ತ ಬಂತು. ಅವನು "ತನ್ನನ್ನ" ಉಳಿಸಿಕೊಳ್ಳಲು ರಾತ್ರಿ ಮಂಟಪಕ್ಕೆ ಓಡಿಬಂದು ಮಾಡುತ್ತಿದ್ದ ಸಾಧನೆಯು ಹೊರಗಿನ ಪ್ರಬಲವಾದ ಶಕ್ತಿಯ ಎದುರಿಗೆ ಸಾಲದಾಯಿತು. ಹಾಗೆ ಊರು ಬಿಡುವ ಯೋಚನೆಯನ್ನೂ ಮಾಡಿದ. ಆದರೆ ಅದು ಅಷ್ಟು ಸುಲಭವಾಗಿರಲಿಲ್ಲ.

ಜನಗಳೆಲ್ಲ ಆಡಿದರು, ಹುಡುಗನಿಗೆ ಮನಸ್ವಾಸ್ಥ್ಯವಿಲ್ಲವೇನು! ಏನು ಮಾಡುವುದು? ಕೆಲವರು ಮುಂದಾಳುಗಳು ಸೇರಿ ಯೋಜನೆ ಮಾಡಿದರು. ಸರಿ! ನಿರ್ಣಯವೂ ಆಯಿತು; ಅವನನ್ನು ಸಮ್ಮತಿಯೇ ಸ್ವಭಾವ ಸಿದ್ಧವಾದ ಸಂಸಾರ ಬಂಧನದಿಂದ ಬಿಗಿಯಬೇಕೆಂದು! ಏನೇನೋ ಆಗುತ್ತೆ--ಆದರೆ ಜೀವನೋಪಾಯಕ್ಕೇ? ಅದಕ್ಕೂ ಒಂದು ಸಲಹೆ ಬಂತು.

ಊರು ಸುಮಾರಾಗಿ ದೊಡ್ಡದಾಗಿದ್ದರೂ, ಅಲ್ಲಿ ಸಾರ್ವಜನಿಕವಾಗಿ ಏನಾದರೂ ಪ್ರಸ್ತಾವ ಮಾಡಲು ಅನುಕೂಲವಾದ ಜಾಗವಿರಲಿಲ್ಲ. ಈಚೆಗೆ ಅಲ್ಲಿಯ ಕೆಲವು ಹುಡುಗರು, ಹೊರಗಡೆ ಹೋಗಿ ವಿದ್ಯಾಭ್ಯಾಸವನ್ನು ಪೂರೈಸಿಕೊಂಡು, ಜೊತೆಗೆ ನಿರುದ್ಯೋಗವನ್ನೂ ಜೊತೆಗೆ ಕಟ್ಟಿಕೊಂಡು ಊರಿಗೆ ಹಿಂದಿರುಗಿ ಮನೆಯಲ್ಲಿ ಆರಾಮವಾಗಿ ಕುಳಿತು ಕಾಲಕಳೆಯುವವರಿಗಂತೂ ಇಂತಹ ಜಾಗದ ಅಭಾವವು ಬಹಳವಾಗಿ ಮನಸ್ಸಿಗೆ ಹತ್ತಿತ್ತು. ಪಟ್ಟಣದಲ್ಲಿ ಉಪನ್ಯಾಸಗಳ ಮಧ್ಯೆ ಬೆಳೆದವರಿಗೆ, ಅದರ ಅಭಾವದಿಂದ ಬೇಜಾರಾಗಿತ್ತು. ಒಳ್ಳೆಯದು ಕೆಟ್ಟದ್ದು ಎಲ್ಲದಕ್ಕೂ ಉಪನ್ಯಾಸವೇ ರೂಢಿಯಾಗಿ ಬಂದು, ಕಟ್ಟೆಯ ಮೇಲೆ ಕುಳಿತುಕೊಂಡು ಬೀದಿಯಲ್ಲಿ ಹೋಗುವ ಯಾರಿಗಾದರೂ ಏನಾದರೂ ಹೇಳಿಬಿಡೋಣವೆನ್ನುವಷ್ಟು ಆತುರ ಮನಸ್ಸಿನಲ್ಲಿ, ಎಳೆತನದ ಉತ್ಸಾಹ ಬೇರೆ! ಆದರೂ ............... ಎಷ್ಟೇ ಆದರೂ . ...... ಕಟ್ಟೆಯ ಮೇಲಾಡುವ ಮಾತಿಗೆ ಕಾಲೇಜಿನ ಉಪನ್ಯಾಸದ ರೀತಿ ಹೇಗೆ ಬರಬೇಕು? ಆ ದೀಪ, ಆ ಸೊಗಸು, ಆ ಮೈಕ್ರೊಫೋನ್, ಆ ಬಿಟ್ಟಿ ಬರೆ,—ಜರಿ ಮುಂಡಾಸದ ಉಪನ್ಯಾಸಕರು— ಮಧ್ಯೆ ಮಧ್ಯೆ, Hear Hear ಕೂಗುಗಳು, ಇದರ ಸಂಗಡಲೆ ಬೆನ್ನಹಿಂದೆ ಮಾಡುವ ಟೀಕೆಗಳು ಇವೆಲ್ಲಾ ಅವರಿಗೆ ಈಗ ಕನಸಿನಂತಾಗಿತ್ತು. ತಮ್ಮೂರಿನಲ್ಲಿಯೂ ಹಾಗೇ ಏನಾದರೊಂದು ಸಂಘವನ್ನು ಮೊದಲು ಮಾಡಿ, 'ಗ್ರಾಮೋದ್ಧಾರ, ರೈತರ ಋಣಬಾಧೆ.......' ಮೊದಲಾಗಿ ದೊಡ್ಡ ದೊಡ್ಡ ಉಪನ್ಯಾಸಗಳನ್ನು ಮಾಡಿಸಿ, ತಾವು ಬಹಳ ಕಾಲ ಸವಿದ ಅನುಭವವನ್ನು ಹಳ್ಳಿಯ ಮೂರ್ಖರಿಗೆ ಒಂದು ಸಲವಾದರೂ ಸವಿಯಲು ಅವಕಾಶಕೊಡ

ಬೇಕೆಂಬ ಉದಾರ ಬುದ್ಧಿ! ಇಷ್ಟಾದರೂ ಅವರಿಗೆ ಬೆಂಬಲವಿಲ್ಲ. ಸುಮ್ಮನೆ ಒಂದು ಸಂಘ, ಸಭೆ, ಚರ್ಚೆ ಎಂದರೆ ಅದನ್ನು ವಿರೋಧಿಸುವವರು ಬಹಳ ಜನ. ಅದಕ್ಕಾಗಿ ಆಲೋಚಿಸಿ,— 'ಒಂದು ಭಜನೆಯ ಮಂದಿರವನ್ನು ಕಟ್ಟುವುದು, ಭಜನೆಯ ಜೊತೆಗೆ ಹರಿಕತೆ, ಪುರಾಣ, ಉಪನ್ಯಾಸ ಮತ್ತೊಂದು ಮೊಗದೊಂದು, ಎಲ್ಲಕ್ಕೂ ಉಪಯೋಗಿಸಿಕೊಳ್ಳುವುದು' ಎಂದು ಏರ್ಪಾಡಾಯಿತು. ಒಟ್ಟಿನಲ್ಲಿ ಊರುಜನ ಒಂದು ಕಡೆ ಸೇರಲು ಅವಕಾಶವಾಯಿತು.

ಕೆಲವು ದಿವಸಗಳಲ್ಲಿ ಮಂಟಪಕ್ಕೆ ಸ್ವಲ್ಪ ದೂರದಲ್ಲೇ ಮಂದಿರವೊಂದನ್ನು ಕಟ್ಟಿದ್ದಾಯಿತು. ಅದಕ್ಕೆ ಸೇರಿದಂತೆ ಹಿಂಭಾಗದಲ್ಲಿ ಒಂದು ಸಣ್ಣ ಮನೆ. ಒಳ್ಳೆಯ ಮುಹೂರ್ತದಲ್ಲಿ ಒಂದು ರಾಮನ ಪಠವನ್ನು ತಂದು ಪ್ರತಿಷ್ಠೆಮಾಡಿ,— ಆ ದಿನವೇ ಅವನಿಗೂ ಒಂದು ಹೆಣ್ಣು ತಂದು ಮದುವೆ ಮಾಡಿ, ಊರವರೆಲ್ಲ ಸಂಭ್ರಮದಿಂದ ಊಟ ತಿಂಡಿಗಳನ್ನು ಮಾಡಿ, ತಿಂದು ತೇಗಿದರು. ಹತ್ತು ಜನ ಸೇರಿ ಕಟ್ಟಿಸಿದ ಮಂದಿರ. ಹತ್ತು ಜನ ಸಾಕಿದ ಹುಡುಗ! ಒಬ್ಬರನ್ನೊಬ್ಬರು ಆಕ್ಷೇಪಣೆ ಮಾಡುತ್ತಿರಲಿಲ್ಲ. ಎಲ್ಲವೂ ವಿಚಕ್ಷಣೆಯಾಗಿಯೇ ನಡೆಯಿತು.

ಅವನು ದೇವರನ್ನು ಪೂಜೆಮಾಡುವುದು, ಮಂದಿರದ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವುದು, ಹುಡುಗರಿಗೆ ಸಂಗೀತ ಹೇಳಿಕೊಡುವುದು— ಅವನಿಗೆ ಕೊಡುವ ಸಂಬಳದ ಜೊತೆಗೆ, ಮಂದಿರದಲ್ಲಿ ಹುಟ್ಟುವಳಿಯಾಗುವ ವರಮಾನವನ್ನೆಲ್ಲಾ ಅವನೇ ತೆಗೆದುಕೊಳ್ಳುವುದು. ಹಿಂದುಗಡೆ ಮನೆಯಲ್ಲಿ ವಾಸ ಎಂದು ಏರ್ಪಾಡಾಯಿತು.

ಸುಮುಹೂರ್ತದಲ್ಲಿ ಅವನನ್ನು ದೇವರಿಗೂ, ದೇವರನ್ನು ಅವನಿಗೂ ಒಪ್ಪಿಸಿ, ಜನರು ಸಂತೋಷವಾಗಿ ತಂತಮ್ಮ ಮನೆಗಳಿಗೆ ತೆರಳಿದರು.

* * * * *

ಮಂದಿರವು ದಿನದಿನಕ್ಕೆ ಅಭಿವೃದ್ಧಿಯಾಯಿತು. ಜನರ ಅಪೇಕ್ಷೆಯು ನೆರವೇರಿತು. ದೊಡ್ಡವರಿಗೆ ಭಜನೆ,— ಹುಡುಗರಿಗೆ ಉಪನ್ಯಾಸ,— ಹೆಂಗಸರಿಗೆ ಪುರಾಣ,— ಎಲ್ಲವೂ ಕ್ರಮವಾಗಿ ನಡೆಯುತ್ತಿತ್ತು. ಅವನೂ ಎಲ್ಲರಂತೆ ಸಂಸಾರಿಯಾದ. ಅವನಿಗೆ ತನ್ನ ಹಿಂದಿನ ಬಾಳು ಕನಸಿನಂತೆ ತೋರುತ್ತಿತ್ತು. ಮಂದಿರದ ಅಭಿವೃದ್ಧಿಯೊಂದೇ ಅವನ ಧ್ಯೇಯವಾಯಿತು. ಬೆಳಗ್ಗೆ ಸಾಯಂ

ಕಾಲ ಹೊಳೆಗೆ ಹೋಗುವವರು,— ಬೀದಿಯಲ್ಲಿ ತಿರುಗುವವರು,— ಮಂದಿರದಿಂದ ತಂಬೂರಿಯೊಡನೆ ಹೊರಡುತ್ತಿದ್ದ ದೇವಗಾನದಿಂದ ಮುಗ್ಧರಾಗಿ ನಿಲ್ಲುತ್ತಿದ್ದರು. ತಾವು ಮಾಡಿದ ಕೆಲಸವು ಸಾರ್ಥಕವಾಯಿತೆಂದು ಹರುಷಚಿತ್ತರಾಗಿ ದೇವರಿಗೆ ಕೈ ಮುಗಿಯುತ್ತಿದ್ದರು. ಮಕ್ಕಳ ಸಡಗರವಂತೂ ಹೇಳತೀರದು. ಯಾವಾಗಲೂ ಮಂದಿರವಾಯಿತು, ಅವರಾಯಿತು. ಅವನು ತಂಬೂರಿ ಮೀಟುತ್ತ ತಲ್ಲೀನನಾಗಿ ಹಾಡುತ್ತಿರುವುದು;—ಮಕ್ಕಳು ಸುತ್ತಲೂ ಕುಳಿತು ಕೈ ತಟ್ಟುತ್ತ, ಹಾಡು ಮುಗಿದ ಕೂಡಲೇ,— 'ರಘುಪತಿ ರಾಘವ ರಾಜಾರಾಮ, ಪತಿತ ಪಾವನ ಸೀತಾರಾಮ,' ಎಂದು ಕೂಗುವುದು. ಆ ಕೂಗು ಹೊರಸೂಸಿ ಮನೆಯನ್ನು ಮುಟ್ಟಿ ತಾಯಿಯರು ಕುಳಿತಲ್ಲೇ ಪುಲಕಿತರಾಗುತ್ತಿದ್ದರು.

ಹೀಗೆ ಎಲ್ಲವೂ ಶಾಂತವಾಗಿ ನಡೆಯುತ್ತಿರುವಾಗ ಇದ್ದಕ್ಕಿದ್ದಂತೆ ಬರಸಿಡಿಲಿನಂತೆ ಸುದ್ದಿಯೊಂದು ಹರಡಿ ಜನರ ಮನಸ್ಸು ಕಲಕಿದಂತಾಯಿತು. ಯಾರೂ ಅದನ್ನು ನಂಬಲಿಲ್ಲ. ನಂಬದಿದ್ದರೂ ಎಲ್ಲರ ಬಾಯಲ್ಲೂ ಅದೇ ಮಾತು. ಅವನಿಗಾಗಿ ಕಷ್ಟಪಟ್ಟು, ಅವನ ಅಭಿವೃದ್ಧಿಯನ್ನು ನೋಡಿ ಹೆಮ್ಮೆ ಪಡುತ್ತಿದ್ದವರ ಮುಖಗಳು ಬಾಡಿದುವು. ಅವರ ಆದರ್ಶದ ಕಲಶವು ಕಳಚಿ ಬಿತ್ತು. ಎಲ್ಲರೂ ತಮ್ಮ ಮನೆಯಲ್ಲಿ ಏನೋ ಆಗಬಾರದ್ದು ಆದಂತೆ ನೊಂದುಕೊಂಡರು. ನಾಲ್ಕು ಜನ ಸೇರಿದ ಕಡೆ ಆ ಮಾತು ಆಡದೆ ಇರುವುದಕ್ಕಾಗುತ್ತಿರಲಿಲ್ಲ.

ಜನರು ಗಂಡಸಿನ ತಪ್ಪನ್ನು ಸಾಧಾರಣವಾಗಿ, ಅಷ್ಟಾಗಿ ಗಣಿಸುವುದಿಲ್ಲ. ಆದರೆ ಯಾರು ಮಂದಿರದಲ್ಲಿ ನೆಲಸಿರುವ ದೇವನಿಗಿಂತಲೂ ಹೆಚ್ಚಾಗಿ ಜನರಿಗೆ ಪ್ರಿಯನಾಗಿದ್ದನೋ, ಯಾರ ಸಲುವಾಗಿ ಅಷ್ಟು ಜನರು ಮಂದಿರದಲ್ಲಿ ಸೇರಿ ತಮ್ಮ ಪ್ರೀತಿಯ ಕಾಣಿಕೆಯನ್ನು ಸಲ್ಲಿಸುತ್ತಿದ್ದರೋ .. ...... ಅವನಲ್ಲಿ ಅದು ಅಕ್ಷಮ್ಯ ಅಪರಾಧವಾಗಿ ತೋರಿತು. ಅದನ್ನು ಮರೆಮಾಚುವುದು ಸಾಧ್ಯವಾಗಲಿಲ್ಲ. ಪತಿತನೆಂದು ಊರೆಲ್ಲಾ ಸಾರುತ್ತಿರುವವನಿಗೆ ಮಮತೆಯನ್ನು ತೋರುವುದೆಂತು!

ಜನರ ಸಿಟ್ಟು ಅವನನ್ನು ಬಿಟ್ಟು ಅವನ ಅವನತಿಗೆ ಕಾರಣಳಾದ ಮಾಯಾವಿನಿಯ ಕಡೆ ತಿರುಗಿತು. ಅವಳ್ಯಾರು....? ಅದ್ಯಾರೋ? ಯಾರಿಗೂ

ಗೊತ್ತಿಲ್ಲ. ಎಲ್ಲರೂ ಹುಡುಕುವವರೇ? ಮುದುಕಿಯರು ಅವಳ ತಲೆಯ ಮೇಲೆ ಬೂದಿಯನ್ನು ಸುರಿಯಲು ಸಿದ್ಧಮಾಡಿಕೊಂಡರು. ಸ್ವಲ್ಪ ಲಕ್ಷಣವಾಗಿರುವ ಹುಡುಗಿಯರನ್ನೆಲ್ಲಾ ಸಂಶಯದೃಷ್ಟಿಯಿಂದ ನೋಡಿದರು. ಆದರೆ ಬೂದಿ ಸುರಿಸಿಕೊಳ್ಳುವ ಭಾಗ್ಯ ಯಾರ ಪಾಲಿಗೂ ಬರಲಿಲ್ಲ!

ಹಿರಿಯರು ಅವನಿಗ ನಯಭಯದಲ್ಲಿ ಬುದ್ಧಿ ಹೇಳಿದರು. ಗೆಳೆಯರು ಗೇಲಿ ಮಾಡಿದರು. ಹೆಂಗಳೆಯರು ತಿರಸ್ಕಾರದಿಂದ ನೋಡಿದರು. ಯಾವುದೂ ಅವನ ಮನಸ್ಸಿಗೆ ಹತ್ತಲಿಲ್ಲ. ಅವನು ಅವರೆದುರಿಗೆ ನಕ್ಕ! ಮರೆಯಲ್ಲಿ ಅತ್ತ-ಅಷ್ಟೆ!

ಜನ, 'ಅವನನ್ನು ದೂರ ಮಾಡಬೇಕು; ಆ ಮಂದಿರಕ್ಕೆ ಇನ್ನು ಕಾಲಿಡಬಾರದು' ಎಂದುಕೊಳ್ಳುತ್ತಿದ್ದರು. ಆ ನಿಶ್ಚಯ ಸಾಯಂಕಾಲದವರೆಗೇ! ಕತ್ತಲಾಗುತ್ತಲೂ ಮಂದಿರದಲ್ಲಿ ದೀಪಗಳನ್ನು ಹಚ್ಚಿ, ಜಾಗಟೆ ಬಡಿದು, ಅವನ ಕೊರಳಿನಿಂದ ಹಾಡಿನ ಅಲೆಯೊಂದು ತೇಲುತ್ತಾ ಬರುವುದೇ ತಡ; ಆ ಮಧುರ ಗಾನಕ್ಕೆ ಮರುಳಾಗದವರೇ ಇರುತ್ತಿರಲಿಲ್ಲ. ಎಲ್ಲರ ಸಿಟ್ಟೂ, ಅವನನ್ನು ದೂರಮಾಡಬೇಕೆಂಬ ನಿಶ್ಚಯವೂ ಮಾಯವಾಗುತ್ತಿತ್ತು. ಜನರು ತಂಡತಂಡವಾಗಿ ಮಂದಿರಕ್ಕೆ ಬಂದು ಸೇರುತ್ತಿದ್ದರು. ಅವರಿಗೆ ಈಚಿನ ದಿನಗಳಲ್ಲಿ ಅದೊಂದು ಅಭ್ಯಾಸವಾಗಿ ಹೋಗಿತ್ತು. ಅದನ್ನು ತಪ್ಪಿಸುವುದು ಬಹಳ ಕಷ್ಟ! ಅಂತಹ ದುರ್ಬಲ ಸಮಯದಲ್ಲಿ, ನಾವು ಹೋಗುವದು ದೇವರಿಗಾಗಿ ಅವನ ನಾಮಸಂಕೀರ್ತನೆಯನ್ನು ಕೇಳುವುದಕ್ಕಾಗಿ ತಾನೇ? ಅವನಿಗಾಗೇನಲ್ಲವಲ್ಲ! ಅವನು ಎಂಥವನಾದರೆ ನಮಗೇನು? ಎಂಬ ತರ್ಕವು ಅವರ ನೆರವಿಗೆ ಬರುತ್ತಿತ್ತು.

ಮಂದಿರಕ್ಕೆ ಜನರು ಮೊದಲಿನಂತೆ ಬರುತ್ತಿದ್ದರೂ, ಅವರು ತನ್ನಿಂದ ದೂರವಾಗುತ್ತಿದ್ದಾರೆ ಎಂಬುದು ಅವನಿಗೆ ತಿಳಿಯದಿರಲಿಲ್ಲ. ಹೆಣ್ಣುಮಕ್ಕಳು ಬರುವುದು ಕಡಿಮೆಯಾಯಿತು; ಬಂದರೂ ಭಜನೆಯ ಕಾಲದಲ್ಲಿ ಒಟ್ಟಿಗೆ ಬರುವುದು, ಗುಂಪಾಗಿ ಹೊರಟು ಹೋಗುವುದು. ಬೀದಿಯಲ್ಲಿ ಕಂಡರೆ ಯಾರೂ ಮೊದಲಿನಂತೆ ವಿಶ್ವಾಸವಾಗಿ ಮಾತಾಡುತ್ತಿರಲಿಲ್ಲ. ಮನೆಗಳಿಗೆ ಕರೆಯುವುದೂ ಕಡಮೆಯಾಯಿತು.

ಅವನು ಅದೆಲ್ಲವನ್ನೂ ತಾಳ್ಮೆಯಿಂದ ಗಮನಿಸುತ್ತಿದ್ದ. ಮನಸ್ಸಿಗೆ ವ್ಯಥೆ ಯಾದರೂ ಅದಕ್ಕೆ ಹೆಚ್ಚು ಅವಕಾಶ ಕೊಡುತ್ತಿರಲಿಲ್ಲ. ಅವನಿಗೆ ಜನರ ದುರ್ಬಲತೆ ಗೊತ್ತು. ಎಲ್ಲಿಯುವರೆಗೆ ತನ್ನ ಕಂಠದಲ್ಲಿ ಮಾಧುರ್ಯವಿರುವುದೋ, ಅಲ್ಲಿಯವರೆಗೂ ಅವರು ತನ್ನನ್ನು ಪೂರ್ತ ಬಿಡಲಾರರೆಂದು ಸಮಾಧಾನ ತಂದುಕೊಳ್ಳುತ್ತಿದ್ದ.

*　　*　　*　　*　　*

ಮೂರುದಿನಗಳಿಂದ ಊರಿನಲ್ಲಿ ಗದ್ದಲವೋ ಗದ್ದಲ. ಸಾವುಕಾರರ ಮನೆಯಲ್ಲಿ ಮಗನ ಮದುವೆ. ಆ ದಿನ ಊರು ಸಂತರ್ಪಣೆ. ಮೂವ್ವತ್ತು ವರ್ಷಗಳಿಂದ ಆ ಊರು ಅಷ್ಟು ಭಾರಿ ಊಟವನ್ನು ಕಂಡದ್ದಿಲ್ಲವೆಂದು ಮಾತಾಡಿಕೊಳ್ಳುತ್ತಿದ್ದರು. ಎಲ್ಲಾ ಜಾತಿಯವರಿಗೂ ಊಟ. ಎಲ್ಲೆಲ್ಲಿಯೂ ಸಂಭ್ರಮ. ಬೀದಿಯಲ್ಲಿ ಜಾತ್ರೆಯ ದಿನ ಹೋಗುವಂತ ಜನರು ಹೊಸ ಬಟ್ಟೆಗಳನ್ನು ಉಟ್ಟು ನಡೆಯುತ್ತಿದ್ದರು. ಎಲ್ಲರ ಮನೆಯ ಬಾಗಿಲಿಗೂ ಬೀಗ. ಅದೆಲ್ಲವನ್ನೂ ನೋಡುತ್ತ ಭೀಮ ನಿಧಾನವಾಗಿ ನಡೆದು ಬರುತ್ತಿದ್ದನು. ಮದುವೆಯ ಮನೆಗೆ ಹೋಗಬೇಕಾದರೆ ಭಜನೆಯ ಮಂದಿರದ ಮುಂದೆಯೇ ಹೋಗಬೇಕು. ಭೀಮ ಹತ್ತಿರ ಬಂದ. ಒಳಗೆ ಹಾಡುತ್ತಿರುವುದು ಕೇಳಿಸಿತು. ಊರೆಲ್ಲ ಹೋದರೂ ಇವನೇಕೆ ಹೋಗಲಿಲ್ಲ. ಎಲ್ಲಿ ಏನಾದರೂ ಮುಂದಾಳಾಗಿ ನಿಂತು ಓಡಾಡುವವನು, ಇಷ್ಟು ಹೊತ್ತಾದರೂ ಇನ್ನೂ ಭಜನೆಯಲ್ಲೇ ಇದ್ದಾನಲ್ಲ! ಅವನಾ ಕರೆದಿಲ್ಲವೋ? ಇರಲಾರದು--, ನೂರು ದೂರು ಮಾಡಿದರೂ ಸಾವುಕಾರರು........ಅವನನ್ನು ಮನೆಯ ಮಗನಂತೆ ಕಂಡುಕೊಂಡಿದ್ದವರು ........ಛೇ—ಎಂದಿಗೂ ಇರಲಾರದು........ಅವರೂ ಕೇಳೋಣ ಎಂದುಕೊಂಡು ಒಳಗೆ ಹೋದ.

ಮುಂದೆ ರಾಮನ ಪಟ. ಆಗ ತಾನೇ ಪೂಜೆಯಾಗಿದೆ. ಮಲ್ಲಿಗೆ ಹೂವು ರಾಶಿರಾಶಿಯಾಗಿ ದೇವನ ಪಾದದ ಬಳಿ ಸುರಿದಿದೆ. ನಾಲ್ಕು ಕಡೆಯಲ್ಲಿಯೂ ದೀಪವು ಉರಿಯುತ್ತಿದೆ. ಧೂಪದ ಹೊಗೆಯಿಂದ ಮಂದಿರವೆಲ್ಲಾ ಘಮಘಮಿಸುತ್ತಿದೆ. ದೇವರೆದುರಿಗೆ ತಂಬೂರಿಯನ್ನು ಮೀಟುತ್ತ ಅವನು ಹಾಡುತ್ತಿದ್ದಾನೆ! "ಅಪರಾಧಿ........ನಾನಲ್ಲ........ಅಪರಾಧ........ನನಗಿಲ್ಲ........ ಕಪಟ ನಾಟಕ........ಸೂತ್ರಧಾರಿ ನೀನೇ........" ಎಂದು ತನ್ನ ಮನವಿಯನ್ನು

ದೇವರಿಗೆ ಒಪ್ಪಿಸುತ್ತಿದ್ದಾನೆ. ಅರೆಮುಚ್ಚಿದ ಕಣ್ಣುಗಳಿಂದ ನೀರು ಧಾರಾಕಾರವಾಗಿ ಹರಿಯುತ್ತಿದೆ! ಮಂದಿರವೆಲ್ಲವೂ ನಾದಮಯವಾಗಿದೆ. ಚಿತ್ರದಲ್ಲಿ ದೇವ ನಗುತ್ತಿದ್ದಾನೆ; ನಗುತ್ತ ಇವನ ಮೊರೆಯನ್ನು ಆಲೈಸುತ್ತಿರುವಂತೆ ಕಾಣುತ್ತಿದೆ.

ಭೀಮ ನಿಂತು ನೋಡಿದ. ಅವನು ಈ ಕಡೆ ತಿರುಗಲಿಲ್ಲ. ತಲ್ಲೀನನಾಗಿ ಹಾಡುತ್ತಿದ್ದ ಅವನು ನೋಡುವುದಕ್ಕೆ ಅಂದವಾದ ಮನುಷ್ಯನೇನಲ್ಲ. ಕಪ್ಪಗೆ ದಪ್ಪನಾಗಿದ್ದ. ಅವನನ್ನು ನೋಡುತ್ತ ಭೀಮ ಮನಸ್ಸಿನಲ್ಲಿ 'ಕೋಗಿಲೆಗೆ ಅಮರ ಕಂಠವನ್ನಿತ್ತಂತೆ ಈ ಮನುಷ್ಯನಿಗೆ ಎಂತಹ ಕಂಠವನ್ನೂ, ಪ್ರೇಮವನ್ನೂ ತುಂಬಿದ್ದೀ ದೇವಾ........! ನೀನು ಕೊಟ್ಟಿರುವುದನ್ನು ಸರಿಯಲ್ಲವೆನ್ನಲು ನಾವೆಷ್ಟರವರು........?' ಎಂದುಕೊಂಡ. ಸ್ವಲ್ಪ ಹೊತ್ತಾಯಿತು ಹಾಡುವುದು ನಿಂತಿತು. ಅವನು ಮಾತ್ರ ಹಾಗೇ ಕುಳಿತಿದ್ದ. ಮೌನವಾಗಿ ಕಣ್ಣಿನಿಂದ ನೀರು ಹರಿಯುತ್ತಿತ್ತು. ಭೀಮ ಒಂದು ಕ್ಷಣ ತಡೆದು,— "ಮುರಲೀ" ಎಂದ.

ಅವನು ಕಣ್ಣು ತೆರೆದು ನೋಡಿ,— "ಕುಳಿತುಕೋ. ಬಂದು ಎಷ್ಟು ಹೊತ್ತಾಯಿತು? ಇದೇನು ಇಷ್ಟು ಹೊತ್ತಿನಲ್ಲಿ ಬಂದೆ? ಊಟಕ್ಕೆ ಹೋಗಲಿಲ್ಲವೇ? ಊರೆಲ್ಲಾ ಮುಗುಚಿದೆಯಲ್ಲ!" ಎಂದನು

"ನೀನೇಕೆ ಹೋಗಲಿಲ್ಲ?" ಭೀಮ ಕೇಳಿದ.

"ನಾನೇಕೆ ಹೋಗಲಿಲ್ಲ? ನಿನಗೆ ಗೊತ್ತಿದೆ; ಈಗ ನಾನು ಯಾರಿಗೂ ಬೇಡ. ಈಗೇಕೆ ಆ ಮಾತು? ನೀನು ಹೋಗು ಊಟಕ್ಕೆ ಹೊತ್ತಾಯಿತು."

"ನಾನು ಊಟಕ್ಕೆ ಹೋಗುವುದಕ್ಕೆ ಬರಲಿಲ್ಲ. ನಿನ್ನನ್ನು ನಮ್ಮನೆಗೆ ಊಟಕ್ಕೆ ಕರೆಯುವುದಕ್ಕೆ ಬಂದೆ."

ಮುರಲಿ ನಗುತ್ತ ಕೇಳಿದ—, "ಏನು ಭೀಮ, ಈ ದಿನ ನಿಮ್ಮನೆಯಲ್ಲಿ?"

"ಮಗುವಿನ ಹುಟ್ಟಿದ ಹಬ್ಬ. ನಡೆ ಹೋಗೋಣ."

"ಇನ್ನೂ ಮಂಗಳಾರತಿಯಾಗಿಲ್ಲ. ನೀನು ಹೊರಡು. ನಾನು ಅರ್ಧ ಗಂಟೆಯೊಳಗಾಗಿ ಬರುತ್ತೇನೆ."

ಭೀಮ ಹೊರಟ. ಅವನು ಮನೆಗೆ ಹೋಗುವ ಹೊತ್ತಿಗೆ ಅವನ ಹೆಂಡತಿ ಹೊಸ ಸೀರೆ ಉಟ್ಟುಕೊಂಡು, ಊಟಕ್ಕೆ ಹೊರಡಲು ಸಿದ್ಧವಾಗಿ ಬಾಗಿಲಿಗೆ ಬೀಗ ಹಾಕುತ್ತಿದ್ದಳು. ಹುಡುಗರೆಲ್ಲಾ ಬೀದಿಯಲ್ಲಿ ನಿಂತಿದ್ದರು. ಭೀಮ ಹಾಕಿದ್ದ ಬಾಗಿಲನ್ನು ತೆಗೆಸಿ ಒಳಗೆ ಹೋದವನೆ ಹೆಂಡತಿಯನ್ನು ಕರೆದು, "ಅಡಿಗೆ ಮಾಡು" ಎಂದು ಹೇಳಿದ.

ಊಟಕ್ಕೆ ಹೋಗುತ್ತೇನೆಂದು ಪಂಚೆ ಹೊದ್ದುಕೊಂಡು ಮನೆಯಿಂದ ಹೊರಟವನು ಒಂದು ಗಳಿಗೆಯಲ್ಲೇ ಏಕಾಏಕಿ ಒಂದಕ್ಕೆ ಬಂದು ಅಡಿಗೆ ಮಾಡೆಂದರೆ ಏನರ್ಥ? ಅವಳಿಗೆ ಆಶ್ಚರ್ಯವಾಯಿತು. "ಏಕೆ?" ಎಂದು ಕೇಳಿದಳು.

"ಏ....... ಕೆ? ಮುರಲಿಯನ್ನು ಊಟಕ್ಕೆ ಕರೆದಿದೇನೆ. ಮೂರು ಜನಕ್ಕೆ ಅಡಿಗೆಯಾಗಬೇಕು. ಬೇಗ ಹೊರಡು ಹೊತ್ತಾಯಿತು; ಹಬ್ಬದ ಅಡಿಗೆಯಾಗಬೇಕು ಏನು ಸಾಮಾನು ಬೇಕೋ ಹೇಳು, ತಂದುಕೊಡುತ್ತೇನೆ."

ಅವಳಿಗೆ ಆಶಾಭಂಗವಾಯಿತು. ಜೊತೆಗೆ ಸಿಟ್ಟು ಬಂದಿತು. ಬೆಳಗಿನಿಂದ ಎಷ್ಟೋ ಉತ್ಸಾಹವಾಗಿ ಎಲ್ಲವನ್ನೂ ಸಿದ್ಧಮಾಡಿಕೊಂಡು ಹೊರಡುವ ಹೊತ್ತಿನಲ್ಲಿ ಹೀಗೆ ಮಾಡಿದರೆ ಹೇಗೆ? ಭೀಮನ ಹೆಂಡತಿ ಅವನಿಗೆ ಏನೂ ಕಡಿಮೆಯಾದವಳಲ್ಲ. ಬೇರೆ ಸಮಯವಾಗಿದ್ದರೆ, 'ನನ್ನನ್ನು ಕೇಳದೆ ನಿಮ್ಮ ಸ್ನೇಹಿತನನ್ನು ಮನೆಗೆ ಊಟಕ್ಕೆ ಕರೆಯಲು ಹೇಳಿದ್ದವರು ಯಾರು? ಬೇಕಾದರೆ ನೀವೇ ಅಡಿಗೆ ಮಾಡಿಕೊಂಡು ಊಟಮಾಡಿ' ಎಂದು ಹೇಳುವಂತಹ ಆಸಾಮಿಯೇ ಸರಿ! ಆದರೆ ಈ ಹೊತ್ತಿನಲ್ಲಿ ಅವನ ಮುಖಭಾವವನ್ನು ನೋಡಿ ಎದುರು ಮಾತಾಡುವ ಧೈರ್ಯ ಅವಳಿಗೆ ಬರಲಿಲ್ಲ— "ಹುಡುಗರನ್ನಾದರೂ ಕಳಿಸುತ್ತೇನೆ. ತುಂಬಾ ಆಶೆಯಿಂದ ಬೀದಿಯಲ್ಲೇ ನಿಂತಿವೆ," ಎಂದಳು.

"ಕಳುಹಿಸು; ಆದರೆ ಚಿಕ್ಕವನು ಮಾತ್ರ ಇಲ್ಲೇ ಇರಲಿ. ಮುರಲಿಗೆ ಅವನ ಹುಟ್ಟಿದ ಹಬ್ಬವೆಂದು ಹೇಳಿದೇನೆ. ಇನ್ನು ಅರ್ಧ ಗಂಟೆಯೊಳಗಾಗಿ ಅವನು ಬರಬಹುದು. ಅದಷ್ಟು ಜಾಗ್ರತೆಮಾಡು," ಎಂದು ಹೇಳಿ ಭೀಮ ಹೊರಗೆ ಹೋದ.

ಆದರೆ ಮುರಲಿ ಅಷ್ಟು ಹೊತ್ತು ಮಾಡಲಿಲ್ಲ. ಆ ದಿನ ಮನಸ್ಸು ಸಮಾಧಾನವಾಗಿರಲಿಲ್ಲವಾಗಿ ಮಂಗಳಾರತಿಯಾದ ಕೂಡಲೇ ಹೊರಟುಬಂದ.

ಭೀಮನ ಮನೆ ಬಾಗಿಲಿನಲ್ಲಿ ಚಿಕ್ಕ ಹುಡುಗ ಕೂತಿದ್ದ. ಮುರಲಿ—, "ಎಲ್ಲೋ ಅಪ್ಪ?" ಎಂದು ಕೇಳಿದ.

"ಹೊರಗೆ ಹೋಗಿದಾನೆ," ಎಂದು ಹುಡುಗ ಹೇಳಿದ.

ಮುರಲಿ ಒಳಗೆ ಹೋದ. ಮನೆಯಲ್ಲಾ ಹೊಗೆಯಿಂದ ತುಂಬಿತ್ತು. ಭೀಮನ ಹೆಂಡತಿ ಒಟ್ಟಿಗೆ ಮೂರು ನಾಲ್ಕು ಒಲೆಗಳನ್ನು ಹಚ್ಚಿಸಿ ಅದರ ಮೇಲೆ ಪಾತ್ರೆ ಇಟ್ಟು, ತರಕಾರಿ ಹೆಚ್ಚುತ್ತಿದ್ದಳು. ಹೊಗೆಯಿಂದಲೋ ಅಥವಾ ಊಟಕ್ಕೆ ಹೋಗಲು ಆಗಲಿಲ್ಲವೆಂಬ ಅಸಮಾಧಾನದಿಂದಲೋ, ಕಣ್ಣೆಲ್ಲಾ ಕೆಂಪಾಗಿ ನೀರಾಡುತ್ತಿತ್ತು. ಮುರಲಿ ಬಾಗಿಲ ಬಳಿ ನಿಂತುಕೊಂಡು

"ಭೀಮ" ಎಂದು ಕೂಗಿದ.

ಭೀಮನ ಹೆಂಡತಿ ನಡುಮನೆಯಲ್ಲಿ ಚಾಪೆ ಹಾಸಿ— "ಕುಳಿತು ಕೊಳ್ಳಿ; ಎಲ್ಲೋ ಹೊರಗೆ ಹೋಗಿದಾರೆ. ಈಗಲೇ ಬರಬಹುದು" ಎಂದು ಹೇಳಿ ಒಳಗೆ ಹೋದಳು. ಅಷ್ಟು ಹೊತ್ತಿಗೆ ಭೀಮ ಸಾಮಾನಿನ ಗಂಟನ್ನು ಹೊತ್ತು ಕೊಂಡು ಒಳಗೆ ಬಂದ. ಆಗಲೇ ಬಂದು ಕುಳಿತಿದ್ದ ಮುರಲಿಯನ್ನು ನೋಡಿ ಅವನ ಮುಖ ಪೆಚ್ಚಾಯಿತು. ಮುರಲಿಯೂ ತಲೆಯೆತ್ತಿ ಅವನನ್ನು ನೋಡಿ ಓಡಿಬಂದು ಭೀಮನನ್ನು ಬಲವಾಗಿ ಅಪ್ಪಿದ. ಭೀಮನಿಗೆ ಆ ಹಿಡಿತದಿಂದ ಬಿಡಿಸಿಕೊಳ್ಳುವುದು ಕಷ್ಟವಾಯಿತು.

ಊರಿನವರು ದೂರ ಮಾಡಿದ ವ್ಯಥೆ ಅವನನ್ನು ಜಗ್ಗಿಸಲಿಲ್ಲ. ಆದರೆ ಈ ಮಿತ್ರನು ತೋರಿದ ಸ್ನೇಹಕ್ಕೆ ಕರಗಿ ಹೋದ. ಹೃದಯದಿಂದ ಮಮತೆಯ ಚಿಲುಮೆಯು ಉಕ್ಕಿ ಹರಿದು—ಭೀಮನ ಬಟ್ಟೆ ಅದರಿಂದ ತೊಯ್ದು ಹೋಯಿತು. ಮುರಲಿ ಅಂದು ನಿಜವಾಗಿ ತನ್ನ ಸ್ಥಿತಿಯನ್ನು ಅರಿತು ಕೊಂಡ.

* * * * *

"ಭೀಮ ನನ್ನದೊಂದು ಪ್ರಾರ್ಥನೆ"

"ಏನು ಹೇಳು?"

"ನಾನು ಹೊರಟು ಹೋಗುತ್ತೇನೆ. ಎಲ್ಲಿಗೆ ಎಂದು ಮಾತ್ರ ಕೇಳ ಬೇಡ. ನಾನು ಈ ಮೋಹ ಮಮತೆಗಳ ಸಿಕ್ಕಿನಲ್ಲಿ ಇರಲಾರೆ. ಎಲ್ಲರ ದೂಷಣೆಯನ್ನೂ ಸಹಿಸಬಲ್ಲೆ. ಆದರೆ ನಿನ್ನ ಈ ನಿಶ್ಚಲ ಪ್ರೇಮವು

ನನ್ನ ಎದೆಯನ್ನು ಇರಿಯುತ್ತಿದೆ. ಅಷ್ಟು ಯೋಗ್ಯತೆ ನನಗಿಲ್ಲ. ಅದನ್ನು ಸಂಪಾದಿಸಲು ಹೋಗುತ್ತೇನೆ."

"ಅದನ್ನುಳಿದು ಬೇರೆ ದಾರಿ ಇಲ್ಲವೆ ಮುರಳಿ?"

"ಇಲ್ಲ, ಭೀಮ! ಇಷ್ಟು ಜನರ ವಿಶ್ವಾಸದ ಅವಲಂಬನದ ಮೇಲೆ ನಿಂತಿರುವ ಬಾಳು,ಬಾಳಲ್ಲ. ನನ್ನ ಕಾಲಮೇಲೆ ನಿಂತು ಮನುಷ್ಯನಾಗಲು ಯತ್ನಿಸುತ್ತೇನೆ. ಅದು ಇಲ್ಲಿರುವವರೆಗೂ ಸಾಧ್ಯವಿಲ್ಲ...........ಇಲ್ಲಿಯ ಹಿರಿಯರು ನನ್ನನ್ನು ಮುಂದಕ್ಕೆ ತಂದರು: ನಿಜ! ನಾನು ಅದನ್ನು ಮರೆಯುವುದಿಲ್ಲ. ಆದರೆ ನನ್ನದೆಂದು ಏನೂ ಉಳಿಸಿಕೊಳ್ಳಬಾರದೆ? ಅದರಲ್ಲೂ ನನ್ನಲ್ಲಿ ನಂಬಿಕೆ ಇಟ್ಟಿರುವ ಮತ್ತೊಬ್ಬರ ವಿಚಾರವನ್ನು ಬೈಲಿಗೆಳೆಯುವುದು ಯಾವ ನ್ಯಾಯ! ವರ್ಷಾಂತರಗಳಿಂದ ನನ್ನ ಸ್ವಭಾವವನ್ನು ತಿಳಿದಿದ್ದರೂ, ಗಾಳಿಯ ಸುದ್ದಿಗೆ ಕಿವಿಗೊಟ್ಟು ನನ್ನನ್ನು ದೂರ ಮಾಡುತ್ತಿದ್ದಾರೆ. ನಾನು ಅದಕ್ಕೆ ಹೆದರುವುದಿಲ್ಲ; ಆದರೆ ಅವರು ಇಲ್ಲಿಗೇ ಬಿಡುವುದಿಲ್ಲ. ಅನ್ವೇಷಣೆ ಇನ್ನೂ ಮುಂದಕ್ಕೆ ಹೋಗಬಹುದು. ನನ್ನಿಂದ ಮತ್ತೊಬ್ಬರಿಗೆ ತೊಂದರೆಯಾಗುವ ಸಂಭವವಿದೆ. ಯಾವ ರೀತಿಯಲ್ಲಿ ನೋಡಿದರೂ ನಾನು ಈ ಜಾಗವನ್ನು ಬಿಡುವುದೇ ಸರಿಯಾಗಿ ಕಾಣುತ್ತದೆ. ಆದರೆ ಹೋಗುವ ಮೊದಲು ನಿನಗೆ ಒಂದು ಮಾತು ತಿಳಿಸಿದರೆ ಒಳ್ಳೆಯದು........ ..." "ಭೀಮ; ಜನರ ಮಾತನ್ನು ನಂಬುವೆಯಾ?"

"ಹೋಗಲಿ ಬಿಡು ಮುರಳಿ! ನಿನಗೆ ವ್ಯಥೆಯಾಗುವಂತಿದ್ದರೆ ಆ ಮಾತು ಬೇಡ. ಅದು ನಿನ್ನ ಸ್ವಂತ ವಿಚಾರ. ಅದನ್ನು ಚರ್ಚಿಸಲು ನನಗೇನು ಅಧಿಕಾರ?"

"ಅಲ್ಲ. ನನ್ನ ಸ್ವಂತ ವಿಚಾರವೇ ಆಗಿದ್ದರೆ ಇಷ್ಟು ತೊಂದರೆಯೇ ಇರಲಿಲ್ಲ; ಅದರಲ್ಲಿ ಹೆಣ್ಣುಹುಡುಗಿಯೊಬ್ಬಳ ಮಾನಾಪಮಾನಗಳೂ ಸೇರಿವೆ. ಆದರೆ ನಿನ್ನಲ್ಲಿ ಹೇಳಿದರೆ ಭಯವಿಲ್ಲ............ನಾನು ಇಲ್ಲಿಗೆ ಬಂದಮೇಲೆ ನನ್ನ ವಿಚಾರ ಇವರಿಗೆ ಗೊತ್ತು. ಅದಕ್ಕೆ ಮೊದಲು ನನ್ನ ಬಾಳು ಹೇಗಿತ್ತೆಂದು ಇವರು ಅರಿಯರು.... ನಾನು ಇಲ್ಲಿಗೆ ಬರುವ ಸ್ವಲ್ಪ ಮೊದಲು, ನಮ್ಮ ತಾಯಿ ತೀರಿ ಹೋಗಿದ್ದಳು. ಅವಳು ಬಹಳ ಖಾಯಿಲೆ

ಇದ್ದಾಗ ದಿಕ್ಕಿಲ್ಲದ ವಿಧವೆಯೆಂದು ನೆಂಟರೆಲ್ಲರೂ ದೂರ ಮಾಡಿದಾಗ ನೆರೆ ಮನೆಯಲ್ಲಿ ಒಬ್ಬ ಹೆಂಗಸು........ಮಹಾತ್ಮಳಾಯಿ ನನಗೆ ಆಶ್ರಯಕೊಟ್ಟು ಕಾಪಾಡಿದಳು. ತನ್ನ ಬಡತನದಲ್ಲಿ ನಮ್ಮನ್ನು ಹೊರೆಯೆಂದು ಭಾವಿಸ ಲಿಲ್ಲ........ ಸ್ವಲ್ಪ ದಿವಸಗಳ ಕೆಳಗೆ ಅವಳಿಗೆ ನಾನು ಇಲ್ಲಿರುವುದು ಹೇಗೋ ತಿಳಿಯಲು ಮಗಳೊಡನೆ ನನ್ನನ್ನು ನೋಡಲು ಬಂದಳು; ಆ ಹುಡುಗಿಯೂ ನಾನೂ ಅಣ್ಣ ತಂಗಿಯರಂತೆ ಒಟ್ಟಿಗೆ ಆಡಿ ಒಂದು ಕಡೆ ಸುಲಿಗುತ್ತಿದ್ದೆವು. ಈಗ ಅವಳು ಒಬ್ಬ ದೊಡ್ಡ ಮನುಷ್ಯನ ಹೆಂಡತಿ. ಎರಡನೇ ಸಂಬಂಧ, ವಯಸ್ಸಾದ ಗಂಡ! ಹಾಗೆಲ್ಲಾ ಅವಳನ್ನು ಹೊರಗೆ ಕಳಿಸುವುದಿಲ್ಲ. ಅವರಿಗೆ ಗೊತ್ತಾಗದಂತೆ ಬಂದಿದ್ದರು. ನೋಡಿದರೆ ಹುಡುಗಿಗೆ ಸಂಸಾರದಲ್ಲಿ ಸುಖ ವಿರುವಂತಿಲ್ಲ. ಇಲ್ಲಿಗೆ ಬಂದ ದಿನ ಮಂದಿರವನ್ನೂ ದೇವರನ್ನೂ ನೋಡಿ ಅವಳಿಗಾದ ಸಂತೋಷ ಹೇಳತೀರದು. ಮನದಲ್ಲೂ ಮನೆಯಲ್ಲೂ ಶಾಂತಿಯು ಸಿಕ್ಕದೆ ಅದನ್ನು ಹೊರಗೆ ದೇವರ ಸನ್ನಿಧಿಯಲ್ಲಿ ಅರಸಲು ಪ್ರಯತ್ನ ಪಡು ತ್ತಿರುವ ಮುಗ್ಧಬಾಲೆ ಅವಳು! ಅವಕಾಶ ಸಿಕ್ಕಿದಾಗ ಇತರರಿಗೆ ತಿಳಿಯ ದಂತೆ ಬಂದು ಪೂಜೆ ಭಜನೆಗಳನ್ನು ನಡೆಸಿ ಹೋಗುತ್ತಾಳೆ. ಅದರಿಂದ ಅವಳಿಗಾಗುವ ಸಮಾಧಾನವನ್ನು ನೋಡಿದರೇ ನನಗೆ ಆಶ್ಚರ್ಯವಾಗುತ್ತದೆ.

ಜನರಿಗೆ ಮಂದಿರಕ್ಕೆ ತಮಗೆ ತಿಳಿಯದಂತೆ ಯಾರೋ ಆಗಾಗ್ಗೆ ಬರುವರೆಂದು ಅನುಮಾನ ಬಂದಿದೆ. ಆದರೆ ಪೂರ್ತಿ ವಿಚಾರ ತಿಳಿಯದು. ತಿಳಿಯಲು ಪ್ರಯತ್ನಪಟ್ಟು ಅದು ಸಾಧ್ಯವಾಗದಿರಲು ಈ ರೀತಿ ನನ್ನ ಹಸರಿಗೆ ಕಳಂಕ ಹಚ್ಚುವ ಸುದ್ದಿಯನ್ನು ಹರಡಿದಾರೆ.......ನಾನು ಅವಳ ವಿಚಾರ ಯಾರಿಗೂ ಹೇಳುವಂತಿಲ್ಲ. ಅವಳನ್ನೂ ಬರಬೇಡವೆಂದು ಹೇಳ ಲಾರೆ; ಈ ಸ್ಥಿತಿಯಲ್ಲಿ ಇಲ್ಲಿಂದ ಹೊರಡುವದೊಂದೇ ಉಳಿದಿರುವ ದಾರಿ ಆದರೆ....ಆದರೆ ಭೀಮ....ಕೆಲವು ದಿವಸ ಮಟ್ಟಿಗೆ....ನಾನು ಒಂದು ಕಡೆ ನಿಂತು ಅವರನ್ನು ಕರೆಸಿಕೊಳ್ಳುವ ವರೆಗೆ....ಮನೆಯ ಕಡೆ ಸ್ವಲ್ಪ ವಿಚಾರಿಸಿ ಕೊಳ್ಳುತ್ತಿರುವೆಯಾ?"

ಭೀಮನಿಗೆ ಮಾತು ಹೊರಡಲಿಲ್ಲ. ತಲೆ ಅಲ್ಲಾಡಿಸಿ ಸಮ್ಮತಿಯನ್ನು ಸೂಚಿಸಿದ.

* * * * *

ಹೊತ್ತು ಇಳಿಯುತ್ತಿತ್ತು. ಜನರೆಲ್ಲರೂ ಹೊಟ್ಟೆ ಬಿರಿಯುವಂತೆ ಊಟ ಮಾಡಿಕೊಂಡು ಅಲ್ಲೆ ಹೊಡೆಯುತ್ತ ಮನೆಗಳಿಗೆ ಹಿಂದಿರುಗುತ್ತಿದ್ದರು. ಯಾವ ಗಾನವು ತನ್ನ ಅದ್ಭುತ ಶಕ್ತಿಯಿಂದ ಊರೆಲ್ಲವನ್ನೂ ಮರುಳು ಮಾಡಿತ್ತೋ, ಅದರ ತರಂಗವು ನದಿಯ ಕಡೆಯಿಂದ ಕೇಳಿಸಿತು. ಜನವು ಮನೆಯ ದಿಕ್ಕನ್ನು ಬಿಟ್ಟು ಆ ಕಡೆ ಓಡಿದರು.

ಕೈಯಲ್ಲಿ ತಂಬೂರಿಯಿಲ್ಲ; ತಾಳವಿಲ್ಲ; ಮುರಲಿ ಆ ಊರಿಗೆ ಬಂದ ದಿನ ಹೇಗೆ ಹಾಡುತ್ತಿದ್ದನೋ ಹಾಗೆ ಕೈ ತಟ್ಟಿಕೊಂಡು ನದಿಯ ಕಲಕಲ ರವದೊಂದಿಗೆ ಹಾಡುತ್ತ ಬಂಡೆಯಿಂದ ಬಂಡೆಗೆ ಹಾರಿ ನದಿಯನ್ನು ದಾಟುತ್ತಿದ್ದನು. ಕತ್ತಲಾಗುತ್ತ ಬಂದ ಹಾಗೆ ಅವನ ಧ್ವನಿಯು ಕತ್ತಲಿನ ಗರ್ಭದಲ್ಲಿ ಅಡಗಿ ಹೋಯಿತು.



## ಕಡೆಯ ದಿನ

ಸಾಯಂಕಾಲವಾಗಿತ್ತು. ಕುಸುಮ ಮನೆಯ ಹಜಾರದಲ್ಲಿ ಒಬ್ಬಳೇ ಕುಳಿತಿದ್ದಳು. ಮುಂದುಗಡೆ ಮೇಜಿನ ಮೇಲೆ ತೆರೆದಿದ್ದ ಪುಸ್ತಕ, ಅದರ ಮೇಲೆ ಮೊಳಕೈಯನ್ನೂರಿ, ಅಂಗೈಯಲ್ಲಿ ಗಲ್ಲವನ್ನಿಟ್ಟುಕೊಂಡು ಕುಳಿತಿದ್ದ ರೀತಿಯನ್ನು ನೋಡಿದರೆ, ಅವಳು ಓದುತ್ತಿಲ್ಲವೆಂದೂ, ಅನ್ಯಮನಸ್ಕಳಾಗಿದ್ದಳೆಂದೂ, ಸುಲಭವಾಗಿ ಹೇಳಬಹುದಾಗಿತ್ತು. ದಾರಿ ತಪ್ಪಿದ ಮಾರ್ಗಸ್ಥನಂತೆ ಅಲ್ಲಿ ಇಲ್ಲಿ ಅಲೆಯುತ್ತಿದ್ದ ದೃಷ್ಟಿಯು ಒಂದೊಂದು ಸಲ ಪುಸ್ತಕದ ಮೇಲೆ ವಿಶ್ರಮಿಸುತ್ತಿತ್ತು.

"ನಾವು ಯಾವಾಗ ಹೀಗೆ ಆಗುವುದು?" ಈ ಪ್ರಶ್ನೆಯು ಸಾಯಂಕಾಲದಿಂದ ಲೆಕ್ಕವಿಲ್ಲದಷ್ಟು ಸಲ ಅವಳ ಮನಸ್ಸಿನ ಮುಂದೆ ಬಂದಿ

ದ್ದಳು ಈಗ ಪುನಃ ಬಂದು, ಅವಳರಿಯದಂತೆ ಒಂದು ನಿಟ್ಟುಸಿರನ್ನು ತಂದಿತು. ಬಾಗಿಲವು ಸರಸರನೆ ಶಬ್ದಮಾಡಿ ತನ್ನ ಸಹಾನುಭೂತಿಯನ್ನು ಸೂಚಿಸಿತು. ಕುಸುಮ ಎಚ್ಚೆತ್ತವಳಂತೆ ಸುತ್ತಲೂ ನೋಡಿದಳು.

"ಎಷ್ಟು ದಿನ ನಮ್ಮ ಬಾಳು ಹೀಗೆ ಇರುವುದು? ಪ್ರತಿಯೊಂದು ಸಣ್ಣ ಪುಟ್ಟ ಕೆಲಸಕ್ಕೂ ಇವರ ಕೈ ಕಾಯಬೇಕು! ಆಗಲೇ ಆರು ಗಂಟೆ ಸಮಯ! ಈ ದಿನ ಹೋಗುಂವತಿಲ್ಲ! ಇವತ್ತೇ ಕೊನೆಯ ದಿನ! ಎರಡು ತಿಂಗಳ ನಿರೀಕ್ಷಣೆ! ಪ್ರತಿ ಸಲವೂ ಪತ್ರಿಕೆಗಳಲ್ಲಿ ಈ ಚಿತ್ರದ ಪ್ರಶಂಸೆಯನ್ನು ಓದಿದಾಗಲೆಲ್ಲಾ ಅದು ಮೈಸೂರಿಗೆ ಬಂದಾಗ ನೋಡಲೇಬೇಕೆಂದು ಮಾಡಿಕೊಂಡಿದ್ದ ಸಂಕಲ್ಪ! ಎಲ್ಲಾ ಈ ದಿನ ಏನಾಯಿತು? ನಾನು ಎಷ್ಟು ಸಲ ಅವರ ಮುಂದೆ ಅದನ್ನು ನೋಡಬೇಕೆಂಬ ಅಪೇಕ್ಷೆಯನ್ನು ತಿಳಿಸಿಲ್ಲ? ಮೂರು ದಿನಗಳಿಂದ ಊರಲ್ಲೆಲ್ಲಾ ದಾರಿಯಲ್ಲಿ—ಕಂಬಗಳ ಮೇಲೆ ಗೋಡೆಗಳ ಮೇಲೆ, ಅದರ ಪ್ರಕಟಣೆಯೇ ಆಗಿದೆ, ಇಷ್ಟಾದರೂ ಅವರಿಗೆ ಅದರ ನೆನಪೇ ಬಂದಿಲ್ಲವೆ! ಮಧ್ಯಾಹ್ನ ಗಡ್ಡ ಹಸನ್ನವಾಗಿ ಜೀವ ಒಂದು ಒಡಿಮಾಡಿಕೊಂಡು, ತಿಂಡಿ ತಿನ್ನುವಾಗ ನೋಟುಬೇಸನ್ನು ಮೇಜಿನ ಮೇಲಿಟ್ಟು, ಕೈ ಒರಗಿಸಿಕೊಂಡು ಏನೆಂದು ಬಿಡುವುದೆ! ಅವರೇಕೆ ನಮ್ಮ ಆಶಯವನ್ನು ಗಮನಿಸುವುದಿಲ್ಲ? ನಾವು ಮೂರು ಹೊತ್ತೂ ಅವರ ಇಷ್ಟವನ್ನರಿತು ಅದರಂತೆ ನಡೆಯುತ್ತಿದ್ದರೂ, ಸ್ವಲ್ಪ ಹೆಚ್ಚು ಕಡಿಮೆಯಾದರೂ ತಪ್ಪು ಸ್ಮರಿಸುವರಲ್ಲ! ಅವರಂತೆಯೇ ನಮಗೂ ಆಗಬೇಕೆಂದು ಏಕೆ ಗೊತ್ತಾಗುವುದಿಲ್ಲ! ಮನುಷ್ಯ, ನನ್ನ ಸುಖ ಸಂತೋಷಗಳಿಗೆ ಒಂದು ಕಾಸಿನ ಬೆಲೆ ಇಲ್ಲ, ಈ ಮನೆಯಲ್ಲಿ—ಛೆ— ಇದಕ್ಕೆ ನಾನು ಕಣ್ಣೀರು ಹಾಕುವುದೆ?"

ಕುಸುಮ ಕಣ್ಣೊರಸಿಕೊಂಡು ಓದಲು ಪ್ರಯತ್ನಪಟ್ಟಳು. ಅವಳು ಸಿನೀಮಾಕ್ಕೆ ಹೋಗದಿದ್ದುದಕ್ಕಿಂತ, ತನ್ನ ಅಪೇಕ್ಷೆಗೆ ಮರ್ಯಾದೆ ದೊರೆಯಲಿಲ್ಲವೆಂಬುದು ಹೆಚ್ಚು ನೋವನ್ನುಂಟುಮಾಡಿತ್ತು. ಓದುತ್ತಿದ್ದ ಇಂಗ್ಲಿಷ ಕಾದಂಬರಿಯ ಸನ್ನಿವೇಶಗಳಲ್ಲಿ ತನ್ನದರೊಡನೆ ಹೋಲಿಸಿಕೊಂಡು ಹೆಚ್ಚು ಉದ್ವಿಗ್ನಳಾಗುತ್ತಿದ್ದಳು.

"ನಮ್ಮ ಹೆಂಗಸರು ಪಾಶ್ಚಾತ್ಯ ಸ್ತ್ರೀಯರಂತೆ ಸ್ವತಂತ್ರರಾಗಬೇಕು. ಇಲ್ಲದಿದ್ದರೆ...."

ಇದ್ದಕ್ಕಿದ್ದಂತೆ ಬಾಗಿಲಬಳಿ ಮೋಟಾರು ನಿಂತಂತಾಯಿತು. "ಕ್ಲಬ್ಬಿಗೆ ಹೋದ ಮೇಲೆ ಜ್ಞಾಪಿಸಿಕೊಂಡು ಯಾರದಾದರೂ ಸ್ನೇಹಿತರ ಕಾರಿನಲ್ಲಿ ಬಂದಿರಬಹುದು! ಈಗ ತನ್ನ ಕಣ್ಣೀರನ್ನು ಕಂಡರೆ ಏನೆಂದುಕೊಂಡಾರು!" ಆಶಯು ಮಿಂಚಿನಂತೆ ಸುಳಿದು ಹೋಯಿತು. ಕುಸುಮ ಬೇಗ ಕಣ್ಣೊರಸಿಕೊಂಡು ಓದುವವಳಂತೆ ಕುಳಿತುಕೊಂಡಳು. ಗಂಡನೆದುರಿಗೆ ತಾನು ಅವಕ್ಕಾಗಿ ಕಾದಿದ್ದಂತೆ ತೋರಿಸಿಕೊಳ್ಳುವುದೆ? ಬಾಗಿಲಿನಲ್ಲಿ ಬೂಟ್ಸಿನ ಕರಕರ ಶಬ್ದ! ಬಂದವರು ಒಳಗೆ ಬರಲಿಲ್ಲ. ಹೊರಗಡೆ ನಿಂತುಕೊಂಡು ಕೇಳಿದರು— "ಎಲ್ಲಿ, ಯಜಮಾನರು?"

ಕುಸುಮನ ಮುಖ ಪೆಚ್ಚಾಯಿತು. ತಿರುಗಿ ನೋಡಿದಳು. ಬಂದವ ಅವಳ ಗಂಡನ ಆಪ್ತಸ್ನೇಹಿತ ಮತ್ತು ದೂರದ ನೆಂಟನಾದ ವಾಸು!

ವಾಸು ಚಕಿತನಾದ. ಅವನು ಕುಸುಮ ಆ ಸ್ಥಿತಿ ಇದ್ದುದನ್ನು ಎಂದೂ ನೋಡಿರಲಿಲ್ಲ. ಅವರ ಮೊದಲನೇ ಭೇಟಿಯು ಅವನ ಮನಸ್ಸಿನಿಂದ ಇನ್ನೂ ಮಾಸಿರಲಿಲ್ಲ. ಆ ದಿನ ಹುಣ್ಣಿಮೆ. ರಸ್ತೆಯ ಎರಡು ಪಕ್ಕದಲ್ಲೂ ಮನೆಗಳು ಬೆಳದಿಂಗಳಿಗೆ ಮೈಯ್ಯೊಡ್ಡಿ ಮರೆವಿನಿಂದ ನಿಂತ ಹಾಗೆ ಕಾಣುತ್ತಿತ್ತು. ಆ ದಿನದ ಬೆಳದಿಂಗಳಿನಲ್ಲಿ ಅದೇನು ಸೊಗಸು! ಪ್ರಪಂಚವನ್ನೆಲ್ಲಾ ತನ್ನ ಉಡಿಯಲ್ಲಿ ಮಲಗಿಸಿಕೊಂಡು ಶಾಂತಿ ಸಂದೇಶವನ್ನು ಬೋಧಿಸುವ ಹಾಗಿತ್ತು. ಯಾರೇ ಆಗಲಿ,-ಸೌಂದರ್ಯವನ್ನು ನೋಡಿ ಆನಂದಿಸುವ ಅಭ್ಯಾಸವಿಲ್ಲದವರು ಕೂಡ, ಒಂದು ಕ್ಷಣ ನಿಂತು ನೋಡಿದ್ದರೆ, ಪ್ರಕೃತಿಯ ಮುಗುಳ್ನಗೆಯ ಸೊಬಗಿಗೆ ಮುಗ್ಧರಾಗದೆ ಇರುತ್ತಿರಲಿಲ್ಲ.

ಬೀದಿಯಲ್ಲಿ ಹೆಚ್ಚು ಜನರಿರಲಿಲ್ಲ. ಮಿತ್ರರಿಬ್ಬರೂ ಮೌನವಾಗಿ ನಡೆದು ಬರುತ್ತಿದ್ದರು. ಶ್ರೀಧರ ಏನೋ ಯೋಚಿಸುತ್ತಿರುವವನಂತೆ ಕಾಣುತ್ತಿದ್ದ. ಅವನು ಯಾವಾಗಲೂ ಹೆಚ್ಚು ಮಾತಿನವನಲ್ಲ. ವಾಸುವಿನ ರೀತಿ ಬೇರೆ. ಅವನು ತೆರೆದ ಹೃದಯದಿಂದ ನಾಲ್ಕು ಕಡೆಗೂ ನೋಡುತ್ತ, ಸೃಷ್ಟಿಯ ಸೊಬಗನ್ನು ಹೀರುತ್ತ ನಡೆದಿದ್ದನು.

ವಾಸು ಸಂಗೀತ ಪ್ರಿಯ. ಸಂಗೀತದ "ಹುಚ್ಚು" ಎಂದರೂ ತಪ್ಪಾಗಲಾರದು. ಹೂವುಗಳ ವಾಸನೆಯೊಂದಿಗೆ ಬೆಳಕು, ಬೆಳದಿಂಗಳಿನಲ್ಲಿ ತೂರಿ ಬರುತ್ತಿದ್ದ ನಾದವು ಅವನ ಮನಸ್ಸನ್ನು ಕೂಡಲೇ ಆಕರ್ಷಿತು. ಮನೆಯು

ಹತ್ತಿರವಾದಂತೆ ಸಂಗೀತವು ಸ್ಪಷ್ಟವಾಗಿ ಕೇಳಿಸುತ್ತ ಬಂದಿತು. ಘನ ವಿದ್ವಾಂಸರ ಕಚೇರಿಯಿಂದ ಹಿಡಿದು, ಬೀದಿಯ ಭಿಕ್ಷುಕರ 'ಪದ'ದ ವರೆಗೆ ಎಲ್ಲವರಲ್ಲಿಯೂ ಒಂದು ಬಗೆಯ ಸೊಗಸನ್ನು ಕಾಣುತ್ತಿದ್ದ ವಾಸುವಿಗೆ, ಅಂದಿನ ಸಂಗೀತದಲ್ಲಿ ಏನೋ ಒಂದು ರೀತಿಯ ಆಕರ್ಷಣೆ ಇರುವಂತೆ ತೋರಿತು.

ಮಿತ್ರನ ಆಹ್ವಾನವನ್ನು ಎದುರು ನೋಡದೆ, ಅವನ ಕಾಲುಗಳು ಅವನರಿಯದಂತೆಯೇ ಮನೆಯ ಕಡೆ ನಡೆದಿದ್ದುವು. ಮನೆಯಲ್ಲಿ ಮತ್ತಾರೂ ಇರಲಿಲ್ಲ. ಹಾಡುವವಳು ಶ್ರೀಧರನ ಪತ್ನಿ ಇರಬೇಕೆಂದು ವಾಸು ತರ್ಕಿಸಿದ. ಕುಸುಮಳು ಮನೆಗೆ ಬಂದ ಮೇಲೆ ಆ ವಿಷಯವೇ ಅವನು ಮರೆತಿರುವುದು. ಹೊರಗಿನ ಸೊಬಗಿನಿಂದ ತಣಿದಿದ್ದ ಹೃದಯಕ್ಕೆ ಗಾನಸುಧೆಯ ಮುದವೇರಿತು. ಸ್ನೇಹಿತನೇನೆಂದುಕೊಂಡಾನೆಂಬ ಅಳುಕಿಲ್ಲದೆ ಮೆಲ್ಲಗೆ ಕಿಟಕಿಯಲ್ಲಿ ಇಣಿಕಿ ನೋಡಿದ

"ಜಗದೋದ್ಧಾರನ.... ಮಗನೆಂದು... ತಿಳಿಯುತ... .. .....ಆಡಿಸಿದಳು ಯಶೋದೆ.. ..."

ಕುಸುಮ ವೀಣೆಯನ್ನು ನುಡಿಸುತ್ತ ಹಾಡುತ್ತಿದ್ದಳು, ಎದುರಿಗೆ ಗೋಪಾಲಕೃಷ್ಣನ ಪಟ ಅದರಲ್ಲೇ ನೆಟ್ಟ ನೋಟ. ಸುತ್ತಲಿನ ಪರಿವೆಯಿಲ್ಲ ಅವಳಿಗೆ, ತಲ್ಲೀನಳಾಗಿ ಪುನಃ ಪುನಃ ಅದನ್ನೇ ಹಾಡುತ್ತಿದ್ದಾಳೆ. ಅಭ್ಯಾಸ ಬಲದಿಂದ ಕೈ ಆಡುತ್ತಿದೆ, ಅಷ್ಟೆ! ಯಶೋದೆಯ ಬಳಿ ಆಡುತ್ತಿದ್ದ ಬಾಲಕೃಷ್ಣನ ಮೂರ್ತಿ ಆ ಕಣ್ಣುಗಳ ಮುಂದೆ ನಲಿಯುತ್ತಿದ್ದಿರಬೇಕು! ಅದರಿಂದಲೇ, ಆ ಭಾವ ಪರವಶತೆಯಿಂದಲೇ ಗಾನಕ್ಕೆ ಅಷ್ಟು ಮಾಧುರ್ಯ! ಮನೆಯೆಲ್ಲವೂ ಗಾನದ ಇಂಪಿನಿಂದ ನಾದಮಯವಾದಂತೆ ತೋರುತ್ತಿತ್ತು.

ಸ್ವಭಾವವಾಗಿ ಹುಡುಗಾಟ ಪ್ರಕೃತಿಯವನಾದ ವಾಸುವನ್ನು ಒಂದು ಬಗೆಯ ಗಾಢವಾದ ಭಾವವು ಕ್ಷಣಮಾತ್ರ ಆವರಿಸಿತು. ಹಾಡುವವರನ್ನೂ ಕೇಳುವವರನ್ನೂ ಏಕಕಾಲದಲ್ಲಿ ವಿಸ್ಮರಿಸಬಲ್ಲ ಶಕ್ತಿ ಸಂಗೀತಕ್ಕಿದೆ. ವಾಸು ಆ ಪ್ರಭಾವಕ್ಕೆ ಒಳಗಾಗಿದ್ದ. ಶ್ರೀಧರ ಯಾವುದನ್ನೂ ಅರಿಯ. ಹಾಡು ಅವನ ಕಿವಿಯನ್ನು ಪ್ರವೇಶಿಸಿತ್ತೋ ಇಲ್ಲವೋ ಅನುಮಾನ! ನಿಧಾನವಾಗಿ ಮೆಟ್ಟಿಲು ಹತ್ತಿ ಬಂದು, ಒರಟಾಗಿ— "ಬಾಗಿಲು" ಎಂದ.

ಸಂಗೀತವು ನಿರ್ಮಿಸಿದ್ದ ಪ್ರಪಂಚವು ಮಾಯವಾಯಿತು. ಬಾಗಿಲು ತೆಗೆದ ಹಾಗಾಯಿತು. ವಾಸು ಎಚ್ಚೆತ್ತು ನೋಡಿದ. ಯಾರೂ ಇರಲಿಲ್ಲ. ಹಿಂದಿನ ನೆನಪಿಗೆ ವೀಣೆಯೊಂದು ಮಾತ್ರ ಹಾಸಿದ್ದ ಜಮಖಾನೆಯ ಮೇಲಿತ್ತು.

ಶ್ರೀಧರ ಒಳಗೆ ಬಂದವನು, "ಬಾಯ್ಯ;—ಒಳಕ್ಕೆ," ಎಂದು ಕರೆದ.

ವಾಸು ಒಳಗೆ ಹೋಗಲಿಲ್ಲ, ಅವನ ಮನಸ್ಸು ಖಿನ್ನವಾಗಿತ್ತು. "ಎಂಥ ಸಮಯದಲ್ಲಿ ಬಾಗಿಲು ತಟ್ಟಿ ಗಲಾಟೆ ಮಾಡಿಬಿಟ್ಟೆ; ಶುದ್ಧ ಒರಟ!" ಎಂದುಕೊಂಡು, "ಇಲ್ಲಪ್ಪಾ, ಹೊತ್ತಾಯಿತು, ನಾಳೆ ಬರುತ್ತೇನೆ." ಎಂದು ಹೇಳಿ ಹೊರಟು ಬಿಟ್ಟ.

ಮನೆಯನ್ನು ಸೇರುವ ಹೊತ್ತಿಗೆ ಅವನಲ್ಲಿ ಕುಸುಮಳ ಬಗೆಗೆ ಒಂದು ರೀತಿಯ ಆದರವು ಉಂಟಾಗಿತ್ತು.

‡ ‡ ‡ ‡ ‡

ವಾಸು ತಂದೆಗೆ ಒಬ್ಬನೇ ಮಗ. ಅವನಿಗೆ ತಾಯಿಯ ನೆನಪೇ ಇರಲಿಲ್ಲ; ಉನ್ನತ ಪದವೀಧರನಾದ ಮಗನನ್ನು ನೋಡಿ ತಂದೆಗೆ ಎಷ್ಟೋ ಹೆಮ್ಮೆ! ಮಗನಿಗೆ ಮದುವೆ ಮಾಡಿ ಹೊಸದಾಗಿ ಸಂಸಾರ ಮಾಡಬೇಕೆಂಬ ಅಪೇಕ್ಷೆ ಅವರಿಗೆ ಬಹಳವಾಗಿತ್ತು. ಇಪ್ಪತ್ತೈದು ವರ್ಷಗಳಿಂದಲೂ ಒಂಟಿ ಜೀವನವನ್ನು ನಡೆಸಿ, ತಬ್ಬಲಿ ಮಗುವನ್ನು ದೊಡ್ಡವನನ್ನಾಗಿ ಮಾಡಿದವರಿಗೆ ಹಾಗನ್ನಿಸುವುದೇನೂ ಹೆಚ್ಚಲ್ಲ. ಮನೆಯಲ್ಲಿ ಹೆಂಗಸಿನ ಹೆಜ್ಜೆಯು ಮಾಸಿ ಬಹಳ ಕಾಲವಾಗಿತ್ತು. ಆದರೆ ಅವರ ಆಸೆಯು ನೆರವೇರುವುದಕ್ಕೆ ಮೊದಲೇ ಅವರು ಹೃದ್ರೋಗಕ್ಕೆ ತುತ್ತಾಗಿ ಈ ಲೋಕವನ್ನು ಬಿಟ್ಟರು.

ವಾಸು ನಿಜವಾಗಿ ಆಗ ತಬ್ಬಲಿಯಾದ. ಅವನಿಗೆ ಕೆಲವು ದಿವಸ ದಿಕ್ಕೇ ತೋಚದಾಯಿತು. ಮದುವೆಯ ಪ್ರಸ್ತಾಪವು ಅಲ್ಲಿಗೇ ನಿಂತಿತು. ಅವನಿಗೆ ಹಿರಿಯರ ಆಸ್ತಿ ಹೇರಳವಾಗಿತ್ತು. ಹೆಣ್ಣು ಕೊಡುವವರಿಗೂ ಅಭಾವವಿರಲಿಲ್ಲ. ಆದರೂ ಅವನ ಮನಸ್ಸು ಮದುವೆಯ ಕಡೆ ಒಲಿಯಲಿಲ್ಲ.

ವಾಸಕ್ಕೆ ದೊಡ್ಡದಾದ ಮಹಡಿಯ ಮನೆ. ಅದನ್ನು ನೋಡಿಕೊಳ್ಳಲು ಆಳು-ಕಾಳುಗಳು. ಎರಡೂ ಹೊತ್ತು, ಹೊತ್ತಿಗೆ ಸರಿಯಾಗಿ ಹೋಟೆಲಿನಿಂದ ಊಟ ತಿಂಡಿಗಳು ಬರುತ್ತಿದ್ದುವು. ಅಷ್ಟು ದೊಡ್ಡ ಮನೆಯಲ್ಲಿ ವಾಸು ಒಬ್ಬನೇ ನಿಂತ.

ಬರಬರುತ್ತ ಅವನ ಒಂಟಿತನವು ಕಡಿಮೆಯಾಗಿ ಹೊರಗಣ ಪ್ರಪಂಚದೊಡನೆ ಸಂಬಂಧವು ಹೆಚ್ಚಾಯಿತು. ಹುಡುಗ ನೋಡುವುದಕ್ಕೆ ಲಕ್ಷಣವಾಗಿದ್ದ. ನಸು ನೀಟಾದ ಮುಖ. ಎಸಳಾದ ಮೂಗು, ಕಾಂತಿಯನ್ನು ಬೀರುವ ಕಣ್ಣುಗಳು, ಕಪ್ಪಾದ ಗುಂಗುರು ಕೂದಲು,—ಇವೆಲ್ಲಾ ನೋಡುವುದಕ್ಕೆ ಆಕರ್ಷಕವಾಗಿದ್ದುವು. ಜೊತೆಗೆ ಸರಳವೂ ಉದಾರವೂ ಆದ ಅವನ ಸ್ವಭಾವವೂ ಜನಗಳಲ್ಲಿ ಅವನಿಗೆ ಹೆಚ್ಚು ಸ್ನೇಹವನ್ನು ಆದರವನ್ನು ದೊರಕಿಸಿದ್ದುವು. ಹುಡುಗರೆನ್ನದೆ ದೊಡ್ಡವರೆನ್ನದೆ, ವಾಸು ಎಲ್ಲರೊಡನೆಯೂ ನಗುತ್ತ ಕಲೆಯುತ್ತಿದ್ದ.

ವಾಸುವಿಗೆ ಮೊದಲಿನಿಂದಲೂ ಕಷ್ಟವೆಂದರೇನೆಂಬುದು ಗೊತ್ತಿರಲಿಲ್ಲ. ಯಾವತರದ ಹೊರೆಯೂ ಇರಲಿಲ್ಲವಾಗಿ, ಅವನಿಗೆ ಪ್ರಪಂಚವೆಲ್ಲವೂ ಸುಖಮಯವಾಗಿ ತೋರುತ್ತಿತ್ತು. ಹೊರಗಡೆ ಮಿತ್ರರು ಅನೇಕರಿದ್ದರು. ನೆರೆಹೊರೆಯವರಲ್ಲಿ ಅವನ ಸಲಿಗೆ ಹೆಚ್ಚು. ಅವರ ಕಷ್ಟನಿಷ್ಠುರಗಳಲ್ಲಿ ಮುಕ್ತಹಸ್ತದಿಂದ ನೆರವಾಗುತ್ತಿದ್ದ. ಯಾವುದನ್ನೂ ವಿಶೇಷವಾಗಿ ಮನಸ್ಸಿಗೆ ಹಚ್ಚಿಸಿಕೊಳ್ಳುವ ಸ್ವಭಾವವಲ್ಲ ಅವನದು. ಅವನಿಗೂ ಶ್ರೀಧರನಿಗೂ ನಡುವೆ ಇದ್ದ ಸ್ನೇಹವು ಗಾಢವಾದದ್ದು. ಅದರಿಂದಲೇ ಅವರಿಬ್ಬರ ಸ್ವಭಾವವೂ ಬೇರೆಯಾದರೂ, ಆಗಾಗ ಭಿನ್ನಾಭಿಪ್ರಾಯಗಳು ಬಂದರೂ ಅವರ ಮನಸ್ಸು ದೂರವಾಗಿರಲಿಲ್ಲ.

‡ ‡ ‡ ‡ ‡

ಆ ದಿನ ಭಾನುವಾರ. ಶ್ರೀಧರನಿಗೆ ಆಫೀಸಿರಲಿಲ್ಲ. ಮನೆಯಲ್ಲಿ ಏನೊ ಬರೆಯುತ್ತ ಕುಳಿತಿದ್ದ. ವಾಸುವಿನ ಕಾರಿನ ಚಿರಪರಿಚಿತವಾದ ಶಬ್ದ ಅವನನ್ನು ಹೊರಕ್ಕೆ ಕರೆಯಿತು. ಬಾಗಿಲಿಗೆ ಹೋಗಿ ಎದುರುಗೊಂಡದ್ದಾಯಿತು.

"ಏನೋ, ಇನ್ನೂ ಬಟ್ಟೆ ಹಾಕಿಕೊಂಡಿಲ್ಲ, ಬಾ,—ಹಾಗೇ ಎಲ್ಲಾದರೂ ಅಲೆದುಕೊಂಡು ಬರೋಣ!"

"ಏನು ಅಲೆಯೋದೋಪ್ಪ. ಬೇಜಾರಾಗಿದೆ. ಹಾಯಾಗಿ ಕುಳಿತು ಹರಟೆ ಹೊಡೆಯೋಣ. ಅದಲ್ಲದೆ ಬಿಸಿಲೂ ಜೋರಾಗಿದೆ."

ಕುಸುಮ ಒಳಗಡೆ ಅಡಿಗೆ ಮಾಡುತ್ತಿದ್ದಳು. ಶ್ರೀಧರ ಕೂತಿದ್ದ ಜಾಗ

ದಿಂದಲೇ ಕೂಗಿ, "ಕಾಫಿ ಇದೆಯೆ? ವಾಸು ಬಂದಿದಾನೆ," ಎಂದ. (ಆವೇಳೆಗೆ ವಾಸು ಮನೆಯಲ್ಲಿ ಹಳಬನಾಗಿದ್ದ.)

ಒಳಗಿನಿಂದ ಉತ್ತರ ಬರಲಿಲ್ಲ. ಕೆಲವು ನಿಮಿಷಗಳಲ್ಲಿ ಎರಡು ಲೋಟ ಕಾಫಿ ಬಂತು.

"ಏನು ಅಡಿಗೆ ಮಾಡಿದ್ದೀ? ವಾಸು ಇಲ್ಲೇ ಊಟಕ್ಕೆ ಏಳುತ್ತಾನೆ" ಎಂದು ಶ್ರೀಧರ ಅವನ ಮುಖವನ್ನು ನೋಡುತ್ತ ಕೇಳಿದ.

"ಇಲ್ಲಿ ಏಳುತ್ತಾನೆಂದು ಯಾರು ಹೇಳಿದವರು? ನಾನು ಹೋಗಬೇಕು, ಕೆಲಸವಿದೆ."

"ಸಾಕು,—ಸುಮ್ಮನಿರಪ್ಪ. ಯಾರೂ ಕಾಣದ ಕೆಲಸ ನಿನ್ನದು!"

"ಬಡವರ ಮನೆ ಊಟ......., ಹೇಗೆ ಆಗುತ್ತೆ? ನ್ಯಾಯವಾಗಿಯೇ ಇದೆ!" ಕುಸುಮ ನಗುತ್ತ ಹೇಳಿದಳು.

"ಅಲ್ಲವೇ ಮತ್ತೆ? ಈಚೆಗೆ ಭಾನುವಾರವೆಲ್ಲಾ ನಿಮ್ಮ ಮನೆಯಲ್ಲೇ ಕಳೆಯುವುದಾಗಿದೆ. ನಾನು ಬರುವುದೂ, ಊಟ ಮಾಡುವುದೂ, ಅಪರೂಪವೇ? ಎಲ್ಲಿ ಕಲಿತೆಯಮ್ಮ ಈ ಜಾಣತನ!"

ಮಾತಿನಲ್ಲಿ ಹೊತ್ತು ಕಳೆಯಿತು. ಅದರಲ್ಲಿ ಬಹು ಭಾಗ ವಾಸುವಿನದು. ನಡುವೆ ಯಾವಾಗಲಾದರೂ ಶ್ರೀಧರ ತನ್ನ ಧ್ವನಿಯನ್ನು ಸೇರಿಸುತ್ತಿದ್ದನು.

ಊಟಕ್ಕೆ ಸಿದ್ಧವಾಗಿದೆ ಎಂಬ ಸೂಚನೆ ಒಳಗಿನಿಂದ ಬಂತು. ಸ್ನೇಹಿತರಿಬ್ಬರೂ ಕಾಲು ತೊಳೆದುಕೊಂಡು, ಒಳಗೆ ಹಾಕಿದ್ದ ಮಣೆಯ ಮೇಲೆ ಕುಳಿತರು.

ಶ್ರೀಧರನ ಮನೆ ಚಿಕ್ಕದಾಗಿದ್ದರೂ ಅಚ್ಚುಕಟ್ಟಾಗಿತ್ತು. ಮನೆಯ ಪ್ರತಿಯೊಂದು ಭಾಗವೂ ಓರಣವಾಗಿದ್ದು ಯಜಮಾನಿಯ ಜಾಣತನವನ್ನು ಸೂಚಿಸುವಂತಿದ್ದಿತು.

ಕುಸುಮ ದೊಡ್ಡತನದಲ್ಲಿ,—ಸುಖದಲ್ಲಿ ಬೆಳೆದವಳು. ಪ್ರತಿಯೊಂದು ಸಣ್ಣ ಕೆಲಸದಲ್ಲೂ ಅವಳು ತೋರುತ್ತಿದ್ದ ಶ್ರದ್ಧೆಯನ್ನೂ, ನಯವನ್ನೂ ನೋಡಿ ವಾಸುವಿಗೆ ಅವಳಲ್ಲಿ ಉಂಟಾಗಿದ್ದ ಆದರವು ಅಭಿವೃದ್ಧಿಯಾಗುತ್ತಿತ್ತು.

"ಏನು ರುಚಿಯಾಗಿದೆಯಮ್ಮ ಅಡಿಗೆ! ಈಗ ನಿನ್ನ ಕೈಯಿನ ಊಟ ತಿಂಡಿಗಳು ಬೀಳಲು ಶುರುವಾದಾಗಿನಿಂದ ನನಗೆ ಹೊಟಲಿನ ಊಟವೆ ರುಚಿಸುತ್ತಿಲ್ಲ!"

" ಸರಿ—ಬಿಡು, ನೀನೊಬ್ಬ ಹೊಗಳುಭಟ್ಟ."

ಕುಸುಮನ ಮುಖದಲ್ಲಿ ಸಂತೋಷದ ಕಿರಣವೊಂದು ಮೂಡಿತು. ಅವಳಿಗೆ ಆ ರೀತಿಯ ಮಾತು ಹೊಸದು. ನಡುನಡುವೆ ಆಡುವ ಅಂತಹದೊಂದು ನಯವಾದ ಮಾತಿನಮೇಲೆ ಸಂಸಾರ ಸುಖದ ಕೆಲವು ಭಾಗವು ನಿಂತಿದೆ ಎಂಬುದನ್ನು ಶ್ರೀಧರ ಅರಿಯ.

ಊಟವಾಯಿತು ಆಮೇಲೆ ಸ್ವಲ್ಪ ವಿಶ್ರಾಂತಿ. ಏಳುವ ಪೊತ್ತಿಗೆ ಬಿಸಿಬಿಸಿಯಾಗಿ ತಿಂಡಿ ಕಾಫಿ ಸಿದ್ಧವಾಗಿತ್ತು. ಅದೂ ಹಾಗೆ. ಕುಸುಮ ಮಾಡದಿರುವ ತಿಂಡಿ ಇಲ್ಲ. ವಾಸು ಬಾಯಿತುಂಬ ಅವಳನ್ನು ಹೊಗಳುತ್ತ ತಟ್ಟೆಯನ್ನು ಬರಿದು ಮಾಡಿದ. ಹೊರಡುವಾಗ ದಂಪತಿಗಳಿಬ್ಬರಿಗೂ ವಂದನೆಯನ್ನು ಸಲ್ಲಿಸುತ್ತ, " ಹೀಗೆ ಎರಡು ಮೂರು ದಿನ ನಿಮ್ಮ ಮನೆಗೆ ಬಂದರೆ, ಅಜೀರ್ಣವಾಗಿ ಖಾಯಿಲೆ ಬೀಳುವುದು ಖಂಡಿತ," ಎಂದು ಹೇಳಿ ಕಾಲು ಹತ್ತಿದ. ಅವನನ್ನು ಹಿಂಬಾಲಿಸಿ ಬಂದ ಶ್ರೀಧರ, " ಒಬ್ಬ ಅಡಿಗೆಯವನನ್ನು ಇಟ್ಟುಕೊಳ್ಳಬಾರದೆ? ಏಕೆ ತಾಪತ್ರಯಪಡುತ್ತೀ." ಎಂದು ಕೇಳಿದ.

" ನಿನಗೆ ಗೊತ್ತಿಲ್ಲ! ನಾನು ಒಂಟಿಯಾಗಿದ್ದು ಸಂಸಾರ ಹೂಡಿದರೆ ನನ್ನ ಮನೆ ಆಚಾರ್ರ ಬಿಟ್ಟ ಹೋಟಲಾಗಿ ಬಿಡುತ್ತೆ! ಅದಲ್ಲದೆ ಮನೆಯಲ್ಲಿ ಹೆಚ್ಚು ಗಲಾಟೆಯಾದರೆ ನನಗೆ ಆಗುವುದಿಲ್ಲ. ನಾನು ಬರಲೆ?"

ವಾಸು ಮನೆಗೆ ಹೋದಮೇಲೂ ತಾನು ಅವರ ನಡುವೆ ಕಳೆದ ದಿನಗಳನ್ನು ನೆನೆಯುತ್ತಿದ್ದ. ಹಾಸಿಗೆಯ ಮೇಲೆ ಮಲಗಿ ಆರಾಮವಾಗಿ ಪುಸ್ತಕದ ಹಾಳೆಗಳನ್ನು ತಿರುವಿ ಹಾಕುತ್ತಿರುವಾಗ ಶ್ರೀಧರನ ಸಂಸಾರದ ಚಕ್ರವು ಅವನ ಕಣ್ಣಮುಂದೆ ಸುಳಿಯುತ್ತಿತ್ತು. ನೋಡುವುದಕ್ಕೆ ಹಾಗಿದ್ದರೂ, ಅವರಿಬ್ಬರಿಗೂ ಸುಖವಿಲ್ಲವೆಂದೂ, ಒಬ್ಬರನ್ನೊಬ್ಬರು ಸರಿಯಾಗಿ ಅರಿತಿಲ್ಲವೆಂದೂ ಅವನಿಗೆ ತೋರುತ್ತಿತ್ತು. ಕುಸುಮಳ ವಿಚಾರದಲ್ಲಿ ಅವನಿಗೆ ಬಹಳ ಸಹಾನುಭೂತಿ. ಅದರ ಬಲದಿಂದ ಸದಾ ಸಮೀಪದಲ್ಲಿರುವ ಶ್ರೀಧರನಿಗಿಂತಲೂ ಚೆನ್ನಾಗಿ, ಅವಳ ತಿಳಿಯಾದ ಹೃದಯವನ್ನು, ಮತ್ತು ಆಶೆ,—ಅಭಿರುಚಿಗಳನ್ನೂ ತಾನು ನೋಡಿದ ಸ್ವಲ್ಪದರಲ್ಲೇ ತಿಳಿದುಕೊಂಡು " ಶ್ರೀಧರ ಎಂತಹ ಭಾಗ್ಯಶಾಲಿ!" ಎಂದುಕೊಳ್ಳುತ್ತಿದ್ದ. ಆದರೆ ಆ ಭಾಗ್ಯಶಾಲಿಗೆ ಕುಸುಮ ಮನೆಯಲ್ಲಿರುವ ಮುದ್ದಿನಂತೆ ಆಗಿದ್ದಳು. ಅವನು ಯೋಚಿಸುವ

ಮೊದಲೇ ಅವನ ಅಪೇಕ್ಷೆಗಳು ನೆರವೇರುತ್ತಿದ್ದುವು. ತನ್ನ ಸ್ವಂತವಿಚಾರ ಗಳನ್ನು ಬದಿಗಿಟ್ಟು ಅವನ ಎಲ್ಲಾ ವಿಚಾರಗಳಲ್ಲೂ ನೆರವಾಗುವ ಸ್ವಭಾವ ಅವಳದು. ತನ್ನ ಇಷ್ಟವೇನೆಂಬುದನ್ನು ಒಂದು ಸಲವಾದರೂ ಗಂಡ ನೆದುರಿಗೆ ಬಾಯಿಬಿಟ್ಟು ಹೇಳುತ್ತಿರಲಿಲ್ಲ. ತನ್ನಂತೆಯೇ ಅವನೂ ತನ್ನ ಇಷ್ಟ ವನ್ನು ತಿಳಿದು ಅದರಂತೆ ನಡೆಯಲೆಂದು ಅವಳ ಬಯಕೆ. ಆದರೆ ಸಾಮಾನ್ಯ ವಾಗಿ ಹಾಗಾಗದೆ ಅವಳ ಅಭಿಪ್ರಾಯಕ್ಕೆ ಧಕ್ಕೆ ತಗಲಿದಾಗಲೆಲ್ಲಾ ಅವಳ ಹೃದಯವು ನೊಂದು ಮಿಡುಕುತ್ತಿತ್ತು. ಆದರೆ ಕುಸುಮ ಅದನ್ನು ಬೇರೆ ಕಡೆಗೆ ತಿರುಗಿಸಿ, "ಛೆ, ಇದೇನು, ಯೋಚನೆ? ನನಗಾಗಿ ಅವರು ಹಗಲಿರುಳೂ ದುಡಿಯುವುದಿಲ್ಲವೆ? ಅವರ ಸಂಪಾದನೆಯಲ್ಲಿ ನಾನು ಉಂಡು ಉಟ್ಟು ಸುಖಿ ವಾಗಿಲ್ಲವೇ?" ಎಂದುಕೊಂಡಾಗ ವಿಷಾದದ ನಗುವು ಅವಳ ಮುಖದಲ್ಲಿ ಕಾಣು ತ್ತಿತ್ತು. ಕುಸುಮ ಮರೆಯಲ್ಲಿ ಕಣ್ಣೊರಸಿಕೊಂಡು, ಮನೆಯ ಕೆಲಸಕ್ಕೆ ತೊಡ ಗುತ್ತಿದ್ದಳು.

ಅವಳು ಯಾರ ಮುಂದೆಯೂ ಅದನ್ನು ತೋರ್ಪಡಿಸದಿದ್ದರೂ,— ವಾಸುವಿನ ಸೂಕ್ಷ್ಮದೃಷ್ಟಿಗೆ ಮರೆಯಾಗಿರಲಿಲ್ಲ. ಅವನು ಅನೇಕ ನೇಳೆ ಅವಳಿಗಾಗಿ ನೊಂದುಕೊಂಡಿದ್ದನು. ನಗುವನ್ನು ಬೀರಲು ಯತ್ನಿಸುತ್ತಿದ್ದ ಅವಳ ಕಣ್ಣುಗಳ ಹಿಂದೆ ಹೃದಯದ ನೋವು ಮೊರೆ ಹೊಕ್ಕಂತೆ ಕಾಣುತ್ತಿತ್ತು.

ಶ್ರೀಧರ ಒಳ್ಳೆಯವನೇ. ಆದರೆ ಅವನದು ಒಂದು ಬಗೆಯ ಸ್ವಭಾವ. ಕಾಲೇಜಿನಲ್ಲಿ ಸ್ನೇಹಿತರ ಜೊತೆಯಲ್ಲೂ ಹಾಗೇ ವರ್ತಿಸುತ್ತಿದ್ದ. ಆದರೆ ಕೈ ಹಿಡಿದ ಪತ್ನಿಯ ಬಳಿಯಾದರೂ ಸ್ವಲ್ಪ ದಯ ಬೇಡವೇ? ಶ್ರೀಧರನಂತಹ ಜನರ ಬಳಿ ಮೌನವ್ಯಥೆಯಿಂದ ಪ್ರಯೋಜನವಿಲ್ಲವೆಂದು, ಆ ಮುಗ್ಧೆಗೆ ತಿಳಿ ಸುವುದು ಹೇಗೆ? ಅವನಿಗೆ ಈ ಕುಸುಮವನ್ನು ಏಕೆ ಗಂಟು ಹಾಕಿದ ಆ ಬ್ರಹ್ಮ? ಅದು ಬಗೆ ಹರಿಯದ ಪ್ರಶ್ನೆ. ಅದರ ತೊಡಕನ್ನು ಬಿಡಿಸುವ ಪ್ರಯತ್ನದಲ್ಲಿ ರುವಾಗಲೇ ನಿದ್ರೆಯು ಅವನನ್ನು ಆವರಿಸುತ್ತಿತ್ತು.

ಕುಸುಮನಿಗೂ ವಾಸುವಿನ ಬಗೆಗೆ ಒಂದು ತರಹ ವಿಶ್ವಾಸ. ಗಂಡನ ಸ್ನೇಹಿತ; ಒಳ್ಳೆಯವನು, ಎಂಬುದರ ಜೊತೆಗೆ, ಒಬ್ಬಂಟಿಗ, ತನ್ನವನೆಂದು ಅಭಿಮಾನ ಪಡುವವರು ಯಾರೂ ಇಲ್ಲ, ಎಂಬ ಕನಿಕರವೂ ಬೆರೆತಿದ್ದಿರ ಬಹುದು. ಅದರ ಫಲವಾಗಿ ಮನೆಯಲ್ಲಿ ಏನು ಮಾಡಿದರೂ,—ಅವನಿಗೆ

ತಪ್ಪುತ್ತಿರಲಿಲ್ಲ. ಎಂಟು ದಿನವಾದರೂ ಮುಚ್ಚಿಟ್ಟಿದ್ದ ತಿಂಡಿ ಅವನು ಬಂದ ದಿನ ಹೊರಗೆ ಬರುತ್ತಿತ್ತು. ತನ್ನ ಒಂಟಿ ಜೀವನದಲ್ಲಿ ಅನುಭವಿಸುತ್ತಿರುವ ಶಾಂತಿಯಲ್ಲಿ ಕೆಲವು ಭಾಗವು ಆ ಮನೆಗೂ, ಕುಸುಮಳ ತಿಳಿಯಾದ ಸ್ನೇಹಕ್ಕೂ, ಸಲ್ಲತಕ್ಕದ್ದೆಂದು ಅವನಿಗೂ ಸರಿಯಾಗಿ ತಿಳಿದಿರಲಿಲ್ಲ.

‡ ‡ ‡ ‡ ‡

ಆ ದಿನ ಕುಸುಮನನ್ನು ಆ ಸ್ಥಿತಿಯಲ್ಲಿ ನೋಡಿ ವಾಸುವಿಗೆ ದಿಗ್ಭ್ರಮೆಯಾಯಿತು. ಅಸ್ತವ್ಯಸ್ತವಾದ ಕೂದಲು, ಕೆದರಿದಂತಿದ್ದ ಮುಖ, ಅಸಮಾಧಾನವನ್ನು ಉಗುಳುವಂತಿದ್ದ ಕಣ್ಣುಗಳು! ಎಲ್ಲವೂ ಅವನಿಗೆ ಹೊಸದಾಗಿ ತೋರಿದುವು. ಸಹನೆಯ ಮೂರ್ತಿಯಂತಿದ್ದ ಅವಳೂ ಇವಳೂ ಒಂದೇ ವ್ಯಕ್ತಿಯೆ? ಎಂದುಕೊಂಡ. ಒಂದು ಕ್ಷಣ ಏನು ಹೇಳುವುದಕ್ಕೂ ತೋರಲಿಲ್ಲ ಆ ಅವಕಾಶದಲ್ಲಿ ಅವಳನ್ನು ಮೊದಲು ನೋಡಿದ ದಿನದಿಂದ ಅದುವರೆಗಿನ ಎಲ್ಲಾ ಘಟನೆಗಳೂ ಅವನ ನೆನಪಿಗೆ ಬಂದುವು.

ಕುಸುಮಳೂ ಅಪ್ರತಿಭಳಾದಳು. ಆ ಹೊತ್ತಿನಲ್ಲಿ ವಾಸು ಬರಬಹುದೆಂದು ಅವಳು ಎಣಿಸಿರಲಿಲ್ಲ. ಆದರೆ ಮರುಕ್ಷಣದಲ್ಲಿ ಚೇತರಿಸಿಕೊಂಡು, ಮನಸ್ಸಿನ ಆಂದೋಳನವನ್ನೆಲ್ಲಾ ಅದುಮಿ, ಸಮಾಧಾನದ ಧ್ವನಿಯಲ್ಲಿ, "ಅವರು ಮನೆಯಲ್ಲಿಲ್ಲ" ಎಂದು ಹೇಳಿದಳು.

ವಾಸು ಹೊರಡಲು ಯತ್ನಿಸಿದ. ಕುಸುಮನಿಗೂ ಅದೇ ಬೇಕಾಗಿತ್ತು. ನವ್ಯ ಅವನು ಬೇಗ ಹೋದರೆ ಸಾಕೆಂದುಕೊಂಡಳು. ಆದರೆ ಅವನಿಗೆ ಹಾಗೇ ಹೋಗಲು ಮನಸ್ಸು ಬರಲಿಲ್ಲ. ಅವಳಿಗೆ ಎರಡು ಸಮಾಧಾನದ ಮಾತು ಹೇಳಿ ಹೋಗೋಣವೆಂದುಕೊಂಡು ಒಳಗೆ ಬಂದು ಕುರ್ಚಿಯ ಮೇಲೆ ಕುಳಿತುಕೊಂಡ. ಮಾತಿಗೆ ಹೇಗೆ ಮೊದಲು ಮಾಡುವುದು? ಮೊದಲು ತಾನು ಬಂದ ವಿಷಯ ತೆಗೆದ.

"'ಅಪೇರಾ'ದಲ್ಲಿ ಒಳ್ಳೆಯ ಪಿಕ್ಚರ್ ಇತ್ತು. ಶ್ರೀಧರನಿಗೂ ಈಹೊತ್ತಿನ ಪ್ರೋಗ್ರಾಂ ಗೊತ್ತಿರಬೇಕು. ಅವತ್ತು ಅವನ ಮೇಜಿನ ಮೇಲಿದ್ದ 'ಫಿಲ್ಮ ಲ್ಯಾಂಡಿ'ನಲ್ಲಿ ಈ ಚಿತ್ರದ ಹೆಸರಿನ ಕೆಳಗೆ ಕೆಂಪುಶಾಯಿಯಲ್ಲಿ ಗುರುತು ಹಾಕಿದ ಹಾಗಿತ್ತು. ಅದರ ಮೇಲೆ ನೀವೂ ಬರುತ್ತೀರೇನೋ ನೋಡೋಣಾಂತ ಬಂದೆ."

ಕುಸುಮ ಆ ವಿಷಯವನ್ನು ಮರೆಯಲು ಪ್ರಯತ್ನ ಪಡುತ್ತಿರುವಾಗ, ಪುನಃ ಆ ಪ್ರಸ್ತಾಪವೇ ಬಂದು ಮನಸ್ಸು ಕಲಕಿದಂತಾಗಿ, ಸ್ವಲ್ಪ ಹೊತ್ತಿನಿಂದಲೂ ಕ್ರಾಂತಿಯನ್ನೆಬ್ಬಿಸಿದ್ದ ವಿಚಾರಗಳು ಸಮಯ ಸಿಕ್ಕಿದ ಕೂಡಲೆ, ಮತ್ತೆ ತಲೆಯಿಕ್ಕಲಾರಂಭಿಸಿದುವು. ತಾನು ಗುರುತು ಹಾಕಿದ್ದನ್ನು ವಾಸುವು ನೋಡಿ ಅದರ ಪ್ರಸ್ತಾಪ ತೆಗೆದನೆಂದು ತಿಳಿದು, ಅವಳಿಗೆ ಹೀನಾಯವಾದಂತಾಯಿತು. ಏನೂ ಹೇಳಲಿಲ್ಲ.

ಅವಳು ಸುಮ್ಮನಿದ್ದುದನ್ನು ನೋಡಿ ವಾಸು,—"ಪಿಕ್ಚರ್ ಏನೊ ಬಹಳ ಚೆನ್ನಾಗಿದೆಯಂತೆ, ಎಲ್ಲಾ ಹೇಳುತ್ತಿದ್ದರು. ಇದೇನು ಶ್ರೀಧರ ಇವತ್ತು ಇಷ್ಟು ಬೇಗ ಹೊರಗೆ ಹೋದ? ನೀವು ಹೋಗಬೇಕೆಂಬ ಉದ್ದೇಶವಿರಲಿಲ್ಲವೇನೋ!" ಎಂದು ಕೇಳಿದ.

ಕುಸುಮ ಏನೋ ಹುಡುಕುವವಳಂತೆ ಎಲ್ಲೊ ನೋಡುತ್ತ, "ಹೋಗಬೇಕಾಗಿತ್ತು.....ಎಲ್ಲೊ ಆಗಲಿಲ್ಲ. ನಾಳೆ ಹೋದರಾಯಿತು,...." ಎಂದಳು.

"ಇವತ್ತೇ ಕಡೆಯ ದಿನ!"

"ಇನ್ನೊಂದು ಸಲ ಬಂದಾಗ.... ಹೋಗುವುದು...."

ವಾಸು ಅವಳ ಮುಖದಲ್ಲಿ ಆಗುತ್ತಿದ್ದ ಬದಲಾವಣೆಯನ್ನೇ ನೋಡುತ್ತಿದ್ದನು. ಗಂಡ ಹೆಂಡಿರಿಬ್ಬರ ಸ್ವಭಾವವನ್ನೂ ಚೆನ್ನಾಗಿ ತಿಳಿದಿದ್ದ ಅವನಿಗೆ ನಡೆದಿರುವುದನ್ನು ಊಹಿಸಲು ಹೆಚ್ಚು ತಡವಾಗಲಿಲ್ಲ.

ಶ್ರೀಧರನಿಗೆ ಯಾವಾಗಲೂ ಸಿನೇಮಾಗಲ್ಲಿ ಆಸಕ್ತಿ ಕಡಿಮೆ. ವಿದ್ಯಾರ್ಥಿದೆಸೆಯಲ್ಲೂ ಅವನು ಸ್ನೇಹಿತರ ಬಲವಂತವಿಲ್ಲದಿದ್ದರೆ ವರ್ಷಗಟ್ಲೆಯಾದರೂ ಥಿಯೇಟರಿನ ಬಳಿ ಸುಳಿಯುತ್ತಿರಲಿಲ್ಲ. ಅಂಥವನ ಮೇಜಿನ ಮೇಲೆ 'ಫಿಲ್ಮ್ ಲ್ಯಾಂಡ್' ಮೊದಲಾದ ಪುಸ್ತಕಗಳನ್ನು ನೋಡಿದಾಗಲೇ ಅವನಿಗೆ ಗೊತ್ತು. ಅವೆಲ್ಲಾ ಕುಸುಮನಿಗಾಗಿ ಎಂದು! ಅದರಲ್ಲಿ ನಡುನಡುವೆ ಉತ್ತಮ ಚಿತ್ರಗಳ ಮೇಲೆ ಮಾಡಿದ್ದ 'ರಿಮಾರ್ಕು' ಗಳನ್ನು ನೋಡಿ ವಾಸು ಅವಳ ಅಭಿರುಚಿಯನ್ನು ಅರಿತಿದ್ದ.

ಶ್ರೀಧರ ಯಾವುದನ್ನೂ ನೋಡಿರಲಾರ. ಪ್ರಾಯಶಃ ಕುಸುಮ ಇನ್ನೂ

ಕೆಲವು ಸೂಚನೆಗಳನ್ನು ಕೊಟ್ಟಿರಬಹುದು. ಅವು ಯಾವುವೂ ಅವನ ಗಮನಕ್ಕೆ ಬಂದಿರಲಾರವು. ನೇರವಾಗಿ ಹೊರಗೆ ಹೊರಟುಹೋಗಿದಾನೆ ಭೂಪ! ಅದೇ ಇಷ್ಟು ಗಲಭೆಗೆ ಕಾರಣ!!

ಈ ಹುಡುಗಿ ತಾನೆ ಯಾಕೆ ಹೀಗೆ ಮಾಡುತ್ತಾಳೆ? ಹೀಗೆ ಮರೆಯಲ್ಲಿ ಅತ್ತು ಸೊರಗಿದರೆ ಬಂದ ಲಾಭವೇನು? ಹೀಗೆ ಇವಳು ವರ್ಷವೆಲ್ಲಾ ಅತ್ತರೂ, ಅವನಿಗೆ ಅದರ ಸುಳಿವೂ ಹತ್ತುವುದಿಲ್ಲ. ಬಾಯಿಬಿಟ್ಟು, "ಹೋಗೋಣ, ನಡಿ—" ಎಂದು ಹೇಳಬಾರದೆ! ಈ ದ್ರಾವಿಡ ಪ್ರಾಣಾಯಾಮವೇಕೆ?

ಕುಸುಮ ಹೋಗಲು ಆಶೆಯುಳ್ಳವಳೆಂಬುದರಲ್ಲಿ ಅನುಮಾನ ಉಳಿಯಲಿಲ್ಲ. ಮನಸ್ಸಿಗೆ ಏನೋ ತೋರಿದಂತಾಗಲು, ತಟಕ್ಕನೆ "ಬರುತ್ತೀಯೇನಮ್ಮ, ಹೋಗೋಣ? ನಾನು ಹೇಗಿದ್ದರೂ ಹೋಗುತ್ತೇನೆ...." ಎಂದ

ಆ ಸೂಚನೆಗೆ ಕುಸುಮ ಬೆಚ್ಚಿದಳು. ಸಂಪ್ರದಾಯ ಬದ್ಧವಾದ ಮನಸ್ಸು ಅದನ್ನು ವಿರೋಧಿಸಿತು. ಆದರೆ ಮಧ್ಯಾಹ್ನದಿಂದಲೂ ಅವಳಲ್ಲಿ ಏಳುತ್ತಿದ್ದ ವಿಚಾರಗಳೂ, ಜನಾಂಗವನ್ನೆ ಆವರಿಸುತ್ತ ಬಂದಿರುವ ಹೊಸ ಭಾವನೆಗಳೂ, ಒಂದಾಗಿ, "ಏಕಾಗಬಾರದು!" ಎಂದು ವಾದಿಸಿದುವು. ಮನಸ್ಸಿನಲ್ಲಿ ಈ ಹೊಯ್ದಾಟವು ನಡೆದಿರುವಾಗ ವಾಸು ಗಡಿಯಾರದ ಕಡೆ ನೋಡುತ್ತ, "ಆಗಲೇ ಆರು ಗಂಟೆಯಾಯಿತು. ಬರುವ ಹಾಗಿದ್ದರೆ ಬೇಗ ಹೊರಡಮ್ಮ....ದಾರಿಯಲ್ಲಿ ಶ್ರೀಧರ ಸಿಕ್ಕಿದರೆ ಅವನನ್ನೂ ಕರೆದುಕೊಂಡು ಹೋಗೋಣ" ಎಂದ.

ವಾಸು ಕೊನೆಯ ಮಾತನ್ನು ಅವಳ ಸಮಾಧಾನಕ್ಕೆಂದು ಹೇಳಿದ. ಅದು ತನ್ನ ಕೆಲಸವನ್ನು ಮಾಡಿತು. ಅದುವರೆಗೆ ಕದಲದೆ ನಿಂತಿದ್ದ ಕುಸುಮ ಒಳಗೆ ಹೋದಳು. ಮನಸ್ಸಿನ ಕದನದಲ್ಲಿ ಹೊಸದಾಗಿ ತೋರಿದ ವಿಚಾರಕ್ಕೇ ಜಯವು ಲಭಿಸಿತು.

ವಾಸು ಕುಸುಮಳನ್ನು ಅದುವರೆಗೆ ನೋಡಿರಲಿಲ್ಲ. ನೋಡಿರಲಿಲ್ಲವೆಂದರೆ,—ನೋಡಬೇಕೆಂದು ನೋಡಿರಲಿಲ್ಲ,—ಅಷ್ಟೆ. ಇದುವರೆಗೂ ಅವನ ಗಮನವೆಲ್ಲಾ ಇದ್ದುದು, ಅವಳ ಅಂತಃಸೌಂದರ್ಯ, ಶ್ರೇಷ್ಠವಾದ,—ತಾನು ಒಂದು

ಕ್ಷಣ ಮಾತ್ರ ಕೇಳಿದ್ದರೂ ಎಂದಿಗೂ ಮರೆಯದಂತಹ ಅಲೌಕಿಕವಾದ ಗಾನ, ಅದರೊಡನೆ ಬೆರೆತಿದ್ದ ಉಜ್ಜ್ವಹೃದಯ,—ಇವುಗಳ ಕಡೆಗೆ. ನವನಾಗರಿಕತೆಯ ಉಡುಪಿನಿಂದ ಅಲಂಕೃತಳಾಗಿ ಬಾಗಿಲುಗಳನ್ನು ಹಾಕಲು ಈ ಕಡೆಯಿಂದ ಆ ಕಡೆಗೆ ಓಡಾಡುತ್ತಿದ್ದ ಚೆಲುವೆಯನ್ನು ನೋಡಿ, "ಕುಸುಮ, ಎಷ್ಟು ಚೆನ್ನಾಗಿದಾಳೆ!" ಎಂದುಕೊಂಡ.

ಇಬ್ಬರೂ ಹೊರಗೆ ಬಂದರು. ಆಳಿಗೆ ಮನೆಯಕಡೆ ಹುಷಾರಾಗಿ ನೋಡಿಕೊಳ್ಳುವಂತೆ ಹೇಳಿ ಕುಸುಮ ಮೋಟಾರು ಹತ್ತಿದಳು.

* * * * *

ಹೊರಗಿನ ತಣ್ಣನೆಯ ಗಾಳಿಯು ಬೀಸಿ ಕುಸುಮನ ಮನಸ್ಸು ಸ್ವಲ್ಪ ಶಾಂತವಾಯಿತು. ಅದರೊಂದಿಗೆ ತಾನು ಮಾಡಿದ ಕೆಲಸವು ಸರಿಯೆ? ಎಂಬ ಯೋಚನೆಯು ತಲೆದೋರಿತು. ಇದುವರೆಗೆ ಅದರ ಸಾಧಕ-ಬಾಧಕ ಗಳು ಅಷ್ಟಾಗಿ ಅವಳ ಮನಸ್ಸಿಗೆ ಬಂದಿರಲಿಲ್ಲ. ಈಗ ನಾನಾವಿಚಾರಗಳು ಒಮ್ಮೆಯೇ ನುಗ್ಗಿ ಬಂದು ತಮ್ಮ ಪ್ರಭಾವವನ್ನು ಆ ಘಳಿಗೆಯಲ್ಲಿ ಅಶಕ್ತಳಾಗಿ ತೋರುತ್ತಿದ್ದ ಅವಳ ಮೇಲೆ ಬೀರಲಾರಂಭಿಸಿದುವು. 'ಈಗಲೂ ಹಿಂದಕ್ಕೆ ಹೋಗೋಣ'ವೆಂದು ಮನಸ್ಸಿಗೆ ಬಂದರೂ, ಅದು ಚೆನ್ನಾಗಿರುವುದಿಲ್ಲವೆಂದು ಸುಮ್ಮನಾದಳು.

ಈ ಕಡೆ ವಾಸುವಿನ ಸ್ಥಿತಿಯೂ ಒಂದು ತೆರನಾಗಿತ್ತು. ಯಾರು ಇದುವರೆಗೆ ಆಕಾಶದ ಕುಸುಮವಾಗಿದ್ದಳೋ, ಅವಳು ತನ್ನೊಡನೆ ಮೋಟಾರಿ ನಲ್ಲಿ ಕುಳಿತಿದಾಳೆ! ಇಷ್ಟು ದಿನಗಳ ಮೇಲಾದರೂ ತಾನು ಅವಳಿಗೆ ಸಂತೋಷ ಕೊಡುವಂಥ ಒಂದು ಸಣ್ಣ ಕೆಲಸವನ್ನು ಮಾಡಲು ಅವಕಾಶ ದೊರೆಯಿತಲ್ಲ ಎಂಬ ಸಂತೋಷ!

ಥಿಯೇಟರು ಸಮೀಪಿಸಿತು. ಕಾರು ನಿಂತಿತು. ಅಲ್ಲಿ ಜನಗಳು ಗುಂಪಾಗಿ ನೆರೆದಿದ್ದರು. ವಾಸು ಮೊದಲು ಇಳಿದವನು ಒಂದು ರೀತಿಯ ಠೀವಿಯಿಂದ ಬಾಗಿಲು ತೆಗೆದು ಕುಸುಮನನ್ನು ಇಳಿಸಿದನು. ಮಹಡಿಯ ಮೆಟ್ಟಿಲುಗಳನ್ನು ಹತ್ತುವಾಗ, ಎದುರಿಗಿದ್ದ ಕನ್ನಡಿಯಲ್ಲಿ ತನಗೆ ಒಪ್ಪುವಂತಿದ್ದ ಹೊಸ ಸೂಟನ್ನೂ, ತಿದ್ದಿದ ಕ್ರಾಪನ್ನೂ ನೋಡಿಕೊಳ್ಳುತ್ತ ಮುಂದೆ ನಡೆದನು.

ಕುಸುಮನ ಸ್ಥಿತಿಯು ಇದಕ್ಕೆ ವಿಪರೀತವಾಗಿತ್ತು. ಮನೆಯಿಂದ ಹೊರಟಾಗ ಇದ್ದ ಅಸಮಾಧಾನವೂ, ಹಟವೂ, ಮಾಯವಾಗಿ ಅದರ ಜಾಗದಲ್ಲಿ ಪಶ್ಚಾತ್ತಾಪವು ಇಣಿಕಿ ನೋಡುತಿತ್ತು. ಅಲ್ಲಿರುವವರೆಲ್ಲರೂ ತನ್ನನ್ನೇ ನೋಡುತ್ತಿರುವಂತೆ ಭಾಸವಾಯಿತು. ಏನೋ ಮಾಡಬಾರದ ಕೆಲಸವನ್ನು ಮಾಡಿದಂತೆ ಆಗಿತ್ತು ಅವಳಿಗೆ! ಗುಂಪಿನಲ್ಲಿ ಅವಳನ್ನೂ ಶ್ರೀಧರನನ್ನೂ ಕಂಡವರು ಅನೇಕರಿರಬಹುದು. ಅವಳು ಫಾಸುವಿನ ಸಂಗಡ ಒಬ್ಬಳೇ ಬಂದಿರುವುದನ್ನು ನೋಡಿದವರೆ ಅವರೆಲ್ಲಾ ಏನೆಂದುಕೊಂಡಾರು? ಕುಸುಮನಿಗೆ ಲಜ್ಜೆಯಿಂದ ದೇಹಾದ್ಯಂತವೂ ಕಂಪಿಸಿ ಮುಖವು ಕೆಂಪಿಟ್ಟಿತು.

ಹೇಗೋ ಥಿಯೇಟರಿನ ಒಳಗೆ ಹೋದದ್ದಾಯಿತು. ಅಲ್ಲಿಯ ಕತ್ತಲೆಯಲ್ಲಿ ಅವಳಿಗೆ ರಕ್ಷಣೆ ಸಿಕ್ಕಿದಂತಾಯಿತು. ಇವರು ಹೋಗುವ ಹೊತ್ತಿಗೆ ಚಿತ್ರವು ಶುರುವಾಗಿತ್ತು. ಹಿಂಭಾಗದಲ್ಲಿ ಹಾಕಿದ್ದ ಉತ್ತಮ ದರ್ಜೆಯ ಸೋಫಾವಮೇಲೆ ಇಬ್ಬರೂ ಕುಳಿತುಕೊಂಡರು.

ಮೇಲ್ಭಾಗದಲ್ಲಿ ವಿದ್ಯುಚ್ಛಕ್ತಿಯ ಬೀಸಣಿಗೆಯು ಗಿರ್ರನೆ ತಿರುಗುತ್ತಿತ್ತು. ಅದರೊಡನೆ ತಲೆಯಲ್ಲಿ ತುಂಬಿದ್ದ ವಿಚಾರಗಳೂ,-ಇಡೀ ಸಿನೇಮಾ ಮಂದಿರವೂ ಸುತ್ತುತ್ತಿರುವಂತೆ ಕುಸುಮನಿಗೆ ತೋರಿತು. ಅವಳಿಗೆ ಎದುರಿಗಿದ್ದ ಒಂದು ಪದಾರ್ಥವೂ,—ಕೊನೆಗೆ ಬಿಳಿಯ ಪರದೆಯಮೇಲೆ ಬೀಳುತ್ತಿದ್ದ ಚಿತ್ರವೂ ಸಹ ಕಾಣಿಸುವಂತಿರಲಿಲ್ಲ.

"ಈ ವೇಳೆಗೆ ಅವರು ಮನೆಗೆ ಬಂದಿರಬಹುದು,....ಆಳಿನ ಮೂಲಕ ವಿಚಾರವನ್ನು ತಿಳಿದುಕೊಂಡು, ...ಏನೆಂದುಕೊಂಡಿರಬಹುದು.... ....?"

ಕುಸುಮನಿಗೆ ಮೊದಲಿನಿಂದಲೂ ಯಾವ ಕೆಲಸದಲ್ಲೇ ಆಗಲಿ,- "ಇದನ್ನು ಮಾಡಿದಕ್ಕೆ ಗಂಡ ಏನೆಂದುಕೊಳ್ಳಬಹುದು? ...ಇದರಿಂದ ಅವನಿಗೆ ಸಂತೋಷವಾಗುತ್ತದೆಯೆ? ..." ಮುಂತಾಗಿ ಯೋಚಿಸಿ ಅಭ್ಯಾಸವೇ ಹೊರತು, ತನ್ನ ಸ್ವಂತ ವ್ಯಕ್ತಿಯಿಂದ ಯಾವುದನ್ನೂ ವಿವೇಚಿಸುವ ರೂಢಿ ಕಡಿಮೆ! ಆ ಅಭ್ಯಾಸವು ಅವಳ ತಾಯಿ ಅಜ್ಜಿಯರ ಕಾಲದಿಂದಲೂ, ನರನಾಳಗಳಲ್ಲಿ ಹರಿದು ಬಂದುದಾಗಿತ್ತು. ಅಲ್ಲಿ ಇಲ್ಲಿ ಸಂಗ್ರಹಿಸಿದ್ದ ಭಾವನೆಗಳಿಗೆ ಆ ಘಳಿಗೆಯಲ್ಲಿ ಜಯವಾದಂತೆ ಕಂಡು ಬಂದರೂ, ಅದು ಕ್ಷಣಿಕವಾದದ್ದು; ಮೊದಲಿನಿಂದಲೂ ರೂಢಿಸಿನಿಂತಿದ್ದ ಭಾವಗಳು ಹಿಂದಿನಿಂದ ಒಟ್ಟಿಗೆ ನುಗ್ಗಿಬಂದು,

ಹೊಸದನ್ನು ತುಳಿದು ತಮ್ಮ ಅಧಿಕಾರವನ್ನು ಸ್ಥಾಪಿಸಿದ್ದುವು. ಅದರ ಬೆಳಕಿನಲ್ಲಿ ಅವಳಿಗೆ ತಾನು ಮಾಡಿದ ಕೆಲಸವು ಶುದ್ಧ ಅವಿವೇಕವೆಂದು ತೋರಿತು.

'ಅವರಿಗೆ ಸ್ಪಷ್ಟವಾಗಿ ಏನೂ ತಿಳಿಸದೆ, ಅವನ ಮನಸ್ಸಿನಲ್ಲಿರುವುದನ್ನು ಅರಿಯದೆ,—ದುಡುಕಿದ್ದು ಪೆಚ್ಚು ಕೆಲಸ! ತಾನಾಗಿ ಅವನ ಸ್ನೇಹಿತರೆದುರಿಗೆ ಅವನ ಮುಖಕ್ಕೆ ಮಸಿಬಳಿದಂತಾಯಿತು. ಅವರೆಲ್ಲ ಅವನ ಕಡೆ ಬೊಟ್ಟು ಮಾಡಿ ನಗುವಂತಾಯಿತು! ಈ ಅಪಮಾನವನ್ನು ಅವನು ಖಂಡಿತ ಮರೆಯುವುದಿಲ್ಲ,—'

"ನನಗೆ ಕೇಳಿದ್ದರೆ ಕರೆದುಕೊಂಡು ಹೋಗುತ್ತಿರಲಿಲ್ಲವೇ? ಹೀಗೇಕೆ ಮಾಡಿದೆ?" ಎಂದು ಕೇಳಿದರೆ ಏನು ಹೇಳುವುದು?

'ಇಲ್ಲ,—ಅವನು ಅದನ್ನೂ ಕೇಳುವುದಿಲ್ಲ! ಅವನ ಕೋಪವೆಂದರೆ, ಒಂದು ಗಳಿಗೆ ಮೇಲೆ ತೋರಿ, ಉಕ್ಕಿ ಹರಿದು ಹೊರಟುಹೋಗುವ ಪ್ರವಾಹವಲ್ಲ, ಒಳಗೇ ಉರಿಯುವ ಅಗ್ನಿ! ಅದರ ಫಲ? ಸಂಸಾರದಲ್ಲಿ ಸುಖಶಾಂತಿಗಳ ಸಮಾಧಿ! ಇಷ್ಟೂ ಏತಕ್ಕಾಗಿ? ಒಂದು ಕ್ಷಣದ ಷೋಕಿಗಾಗಿ!!'

ಕುಸುಮನ ಮನಸ್ಸಿನ ಪರದೆಯ ಮೇಲೆ ಕಾಣುತ್ತಿದ್ದುದು ಅವಳ ಸಂಸಾರದಲ್ಲಿ ಉಂಟಾಗಬಹುದಾದ ಒಡಕಿನ ಚಿತ್ರ! ಬರಬರುತ್ತ ಅದೂ ಕಾಣದಾಯಿತು. ಕಣ್ಣು ಮಂಜಾಗುತ್ತ ಬಂದಿತು. ವಸ್ತ್ರದಿಂದ ಕಣ್ಣೊರಸಿಕೊಂಡು, ಇಷ್ಟಕ್ಕೆ ಕಾರಣವಾದ ಆ 'ವಿಖ್ಯಾತ' ಚಿತ್ರದ ಕಡೆಗೊಮ್ಮೆ ಪ್ರಯತ್ನಪೂರ್ವಕವಾಗಿ ನೋಡಿದಳು. ಅಲ್ಲಿ ನಡೆಯುತ್ತಿದ್ದುದೇನು?

'ಒಬ್ಬ ಹೆಂಗಸು; (ಅವಳೆ ನಾಯಕಿಯಿರಬಹುದು) ಉಕ್ಕಿಬರುತ್ತಿದ್ದ ದುಃಖವನ್ನು ತಡೆದು, ತುಟಿಯನ್ನು ಕಚ್ಚುತ್ತ ಏನೋ ಮಾತಾಡಲು ಪ್ರಯತ್ನಪಡುತ್ತಿದ್ದಾಳೆ. ನಾಯಕನು ಅವನ್ನು ಗಮನಿಸದೆ ರೋಷದಿಂದ ಬಾಗಿಲನ್ನು ಧಡಾರನೆ ಮುಚ್ಚಿ ಹೊರಗೆ ಹೋಗಿದಾನೆ; ಇದುವರೆಗೆ ತಡೆದಿದ್ದ ದುಃಖವು ಕಟ್ಟೆಯೊಡೆದ ಪ್ರವಾಹದಂತೆ ತಾನೇತಾನಾಗಿದೆ. ಅಳುವಿನಲ್ಲಿ ಮುಳುಗಿದ್ದ ಅವಳನ್ನು ಆಗತಾನೇ ಒಳಗೆಬಂದ ಸ್ನೇಹಿತೆಯು ಸಂತೈಸುತ್ತಿದ್ದಾಳೆ!'

ಸಂದರ್ಭವು ಏನೆಂಬುದು ಕುಸುಮನಿಗೆ ಗೊತ್ತಾಗಲಿಲ್ಲ. ಅದುವರಿಗೆ ನಡೆದಿದ್ದ ಕಥೆ ಗೊತ್ತಿದ್ದರೆ ತಾನೇ ಮುಂದೆ ಗೊತ್ತಾಗುವುದು? ಇವಳೇಕೆ ಅಳುತ್ತಾಳೆ? ನಾಗರಿಕತೆಯ ಪರಮಾವಧಿಯನ್ನು ಮುಟ್ಟಿ,—ಸ್ವಾತಂತ್ರ್ಯದ

ಉನ್ನತಶಿಖರವನ್ನೇರಿರುವ ಇವಳಿಗೂ ಅಳುವೇ? ಹೆಂಗಸು ಅಳುತ್ತಲೇ ಇರಬೇಕೇನು! ಅದಕ್ಕೇ ಏನು ಅವರು ಹುಟ್ಟಿರುವುದು? ಮೊದಲಾದ ಪ್ರಶ್ನ ಮಾಲಿಕೆಗಳು ಒಂದಾಗುತ್ತಲೊಂದು ಅವಳ ಮುಂದೆ ಬರುತ್ತಿದ್ದವು.

ಮುಂದೆ ಏನು ನಡೆಯಿತೆಂಬುದು ಅವಳಿಗೆ ಗೊತ್ತಾಗಲಿಲ್ಲ. ಒಳಗಿನ ತಳಮಳವನ್ನು ತಡೆದುಕೊಂಡು ಇನ್ನು ಅಲ್ಲಿ ಕುಳಿತಿರುವುದು ಅವಳಿಂದಾಗ ಲಿಲ್ಲ. ಅಲ್ಲಿಯ ವಾತಾವರಣವೆಲ್ಲ ವಿಷಪೂರಿತವಾದಂತೆ ತೋರಿತು. ಕುಳಿತಿದ್ದ ಸೋಫಾದಿಂದ ಏಕಕಾಲದಲ್ಲಿ ಅನೇಕ ಮುಳ್ಳುಗಳು ಚುಚ್ಚುವಂತೆ ತೋರಿತು. ಫಕ್ಕನೆ ಎದ್ದು ನಿಂತಳು.

ವಾಸುವಿಗೆ ಗಾಬರಿಯಾಯಿತು,—"ಯಾಕಮ್ಮ! ಮನೆಗೆ ಹೋಗೋಣವೆ?" ಎಂದು ಕೇಳಿದ.

ಕುಸುಮ ಮಾತಾಡಲಿಲ್ಲ. ನೆಟ್ಟಗೆ ಹೊರಗೆ ಬಂದಳು. ವಾಸು ಮೂಗನಂತೆ ಅವಳನ್ನು ಹಿಂಬಾಲಿಸಿದ. ದೀಪದ ಬೆಳಕಿನಲ್ಲಿ ಅವಳ ಮುಖವು ಹುಚ್ಚಿಯ ಮುಖದಂತೆ ಕಾಣಿಸಿತು. ಒಳಗೆ ಕುಳಿತಿದ್ದಾಗಲೇ ಅವಳು ಮನಸ್ಸು ಸಮಾಧಾನವಿಲ್ಲದೆ ಒದ್ದಾಡುತ್ತಿದ್ದುದು, ಅವನಿಗೆ ಅಸ್ಪಷ್ಟವಾದ ಬೆಳಕಿನಲ್ಲಿ ಕೊಂಚಮಟ್ಟಿಗೆ ಗೊತ್ತಾಗಿತ್ತು. ಆದರೆ ಅದು ಈ ಮಟ್ಟಕ್ಕೇರಿವೆ ಎಂದು ಅವನು ತಿಳಿದಿರಲಿಲ್ಲ.

ಇಬ್ಬರೂ ಮೌನವಾಗಿ ಕಾರು ಹತ್ತಿದರು. ಆ ವೇಳೆಯಲ್ಲಿ ಏನಾದರೂ ಮಾತಾಡುವುದಕ್ಕಿಂತ ಸುಮ್ಮನಿರುವುದೇ ಮೇಲೆಂದು ವಾಸುವೂ ಸುಮ್ಮನಿದ್ದನು.

ಮನೆಯ ಬಳಿ ಆಳು ತೂಕಡಿಸುತ್ತ ಕುಳಿತಿದ್ದವನು ಬೇಗ ಎದ್ದು ನಿಂತುಕೊಂಡನು.

"ನಾನು ಹೊರಡಲೇನಮ್ಮ? ಚಿತ್ರವು ನಿನ್ನ ಮನಸ್ಸಿಗೆ ಹಿಡಿಸಿದ ಹಾಗಿಲ್ಲ. ಹೋಗಲಿ, ಬಿಡಮ್ಮ,—ಏನೂ ಯೋಚನೆ ಮಾಡಬೇಡ. ನಾವೆಲ್ಲ ಇನ್ನೊಂದು ಸಲ ಬಟ್ಟಿಗೆ ಹೋಗೋಣ."

ಕುಸುಮ ಅವನ ಕಡೆಗೆ ಒಂದು ವಿಚಿತ್ರ ರೀತಿಯಲ್ಲಿ ನೋಡಿ, "ಥ್ಯಾಂಕ್ಸ" ಎಂದಳು.

ಆ ನೋಟದಲ್ಲಡಗಿದ್ದ ಅಸಮಾಧಾನವನ್ನೂ, ತಿರಸ್ಕಾರವನ್ನೂ ನೋಡಿ ವಾಸುವು, "ಇದೀಗ, ನ್ಯಾಯ !" ಎಂದುಕೊಂಡು ಮನೆಯ ದಾರಿ ಹಿಡಿದನು.

* * * * *

ಒಳಗೆ ಹೋಗುತ್ತಲೂ ಶ್ರೀಧರ ಇನ್ನೂ ಮನೆಗೆ ಬಂದಿಲ್ಲವೆಂದು ತಿಳಿದು, ಅವಳಿಗೆ ಸ್ವಲ್ಪ ಸಮಾಧಾನವಾಯಿತು. ಅಲ್ಲಿದ್ದ ಕುರ್ಚಿಯಮೇಲೆ ಹಾಗೇ ಒರಗಿಕೊಂಡು ಅದುವರೆಗೆ ನಡೆದುದೆಲ್ಲವನ್ನೂ ನೆನಸಿಕೊಂಡಳು. ಅದು ಒಂದು ಕನಸಿನಂತೆ ತೋರಿತು.

"ಮುಂದೇನು....? ಮನೆಗೆ ಬಂದ ಮೇಲೆ ಎಲ್ಲವನ್ನೂ ಹೇಳುವುದು. ಅದರ ಪರಿಣಾಮ ಏನಾದರೂ ಆಗಲಿ; ಬಂದುದನ್ನು ಅನುಭವಿಸುವುದು, ಎಂದು ನಿರ್ಧರ ಮಾಡಿಕೊಂಡು ಹಾಸಿಗೆಯ ಮೇಲೆ ಮಲಗಿದಳು. ಆದರೆ ನಿದ್ರೆ ಬರಲೊಲ್ಲದು ! ಹೊತ್ತು ಕಳೆದಂತೆ ಮನಸ್ಸಿನ ಉದ್ವೇಗವು ಹೆಚ್ಚಾಯಿತು. ಅಷ್ಟು ಹೊತ್ತಾದರೂ ಶ್ರೀಧರನ ಸುಳಿವಿಲ್ಲ ! ಏಕೆ ಬರಲಿಲ್ಲ ? ಕಾರಣವೇನು ? ಅವನು ಎಂದೂ ಅಷ್ಟು ಹೊತ್ತು ಮಾಡಿದವನಲ್ಲ !

"ನಾನು ಹೋಗಿದ್ದುದನ್ನು ದೂರದಿಂದಲೇ ಎಲ್ಲಾದರೂ ನೋಡಿ, ಸಿಟ್ಟಿನಿಂದ ಬಂದಿಲ್ಲವೇ ? ಛೆ, ಇರಲಾರದು. ಅದಕ್ಕಾಗಿ ಈ ಅಪರಾತ್ರಿಯಲ್ಲಿ ಹೊರಗಿರುವುದೇ ?....ಇಲ್ಲ, ಏನಾದರೂ ಅಪಾಯ ಸಂಭವಿಸಿರಬಹುದೇ.....?"

ಮನಸ್ಸು ಯಾವ ಕಾರಣವನ್ನೂ ಒಪ್ಪುತ್ತಿರಲಿಲ್ಲ. ಯೋಚನೆ ಮಾಡದೆ ಇರುವುದಕ್ಕೂ ಆಗುವಂತಿರಲಿಲ್ಲ. ಒಂದು ನಿಮಿಷವು ಒಂದು ಯುಗದಂತೆ ತೋರಿತು. ನಿಮಿಷಗಳು ಉರುಳಿ ಗಂಟೆಗಳಾದವು. ಆಗಲೊಡನೆ ಕುಸುಮನೂ ಅಶಾಂತಿಯಿಂದ ಹಾಸಿಗೆಯಲ್ಲಿ ಹೊರಳುತ್ತಿದ್ದಳು.

ದೀಪವು ಸಣ್ಣಗೆ ಉರಿಯುತ್ತಿತ್ತು. ಬಾಗಿಲು ತಟ್ಟಿದಂತಾಯಿತು. ಕುಸುಮ ಬಾಗಿಲು ತೆಗೆದುಬಂದು ಪುನಃ ಹೊದ್ದು ಕೊಂಡು ಮಲಗಿದಳು.

ಶ್ರೀಧರ ಒಳಗೆ ಬಂದ. ಅವನನ್ನು ನೋಡಿದ ಕೂಡಲೇ ಕುಸುಮಳಿಗೆ ಮೊದಲು ಮಾಡಿಕೊಂಡಿದ್ದ ಸಂಕಲ್ಪವೆಲ್ಲಾ ಹುಡಿಯಾಗಿ, ಒಂದು ಬಗೆಯ ಅಧೈರ್ಯವೂ, ದೈನ್ಯವೂ ಅವಳನ್ನು ತಬ್ಬಿದುವು. ಮಾತನಾಡಲು ಸಾಧ್ಯ ವಿಲ್ಲದೆ ಸುಮ್ಮನೆ ಅವನ ಕಡೆ ನೋಡುತ್ತಿದ್ದಳು.

"ಊಟವಾಯಿತೇ ಕುಸುಮ?" ಶ್ರೀಧರ ಗಡಿಯಾರವನ್ನು ಬಿಚ್ಚುತ್ತ ಕೇಳಿದ; ಆಗಲೇ ಎರಡು ಗಂಟೆ ಆಗಿತ್ತು.

ಕುಸುಮ ಮಾತಾಡಲು ಪಟ್ಟ ಪ್ರಯತ್ನವು ವ್ಯರ್ಥವಾಯಿತು. ನಾಲಗೆ ಅವಳ ಇಷ್ಟವನ್ನು ಮನ್ನಿಸಲಿಲ್ಲ! ಕಣ್ಣಿನಲ್ಲಿ ನೀರು ತುಂಬಿ ಬಂತು. ಮುಖ ವನ್ನು ಗೋಡೆಯ ಕಡೆಗೆ ತಿರುಗಿಸಿಕೊಂಡಳು.

ಶ್ರೀಧರ ಅದನ್ನು ತಪ್ಪಾಗಿ ತಿಳಿದುಕೊಂಡನು. ಅವನಿಗೆ ಅಸಮಾಧಾನ ವಾಯಿತು. ತಾನು ಹೊತ್ತಾಗಿ ಬಂದುದಕ್ಕೆ ಅವಳು ಹೀಗೆ ಮಾಡುತ್ತಾಳೆಂದು ಅವನ ಗ್ರಹಿಕೆ! ಹೊತ್ತಾದುದಕ್ಕೆ ಕಾರಣವನ್ನು ಸಹ ಕೇಳದೆ ಮುಖ ತಿರುಗಿಸಿಕೊಳ್ಳುವುದೆ........?

ಅವನಿಗೆ ಇಲ್ಲಿನ ವಿಚಾರ ಏನೂ ತಿಳಿಯದು. ಮಾಮೂಲಿನಂತೆ ಕ್ಲಬ್ಬಿಗೆ ಹೋದ. ಅಷ್ಟು ಹೊತ್ತಿಗೆ ಕೆಲವರು ಸ್ನೇಹಿತರು 'ಬೃಂದಾವನ'ಕ್ಕೆ ಹೊರ ಟಿದ್ದವರು ಅವನನ್ನು "ಬನ್ನಿ, ಬೇಗ ಬಂದುಬಿಡೋಣ," ಎಂದು ಕರೆದರು.

"ಇಲ್ಲ,....ನೀವೆಲ್ಲಾ ಹೊರಡಿ...." ಎಂದ ಶ್ರೀಧರ.

"ನಾವು ಹೊರಡುವುದಕ್ಕೆ ನೀವೇನು ಹೇಳುವುದು? ನಾವು ಹೊರಟೇ ಇದ್ದೇವೆ! ಜೊತೆಯಲ್ಲಿ ಓಡಾಡಿಕೊಂಡು ತಿಂಡಿಗಿಂಡಿ ಹೊಡೆದು ಬರೋಣ! ಏಕೆ ಅನುಮಾನ? ಮನೆಯಲ್ಲಿ ಅಪ್ಪಣೆಯಾಗಬೇಕೇನೋ!"

"ಅಂಥಾದೇನೂ....ಇಲ್ಲ. ಆದರೆ ಒಂದು ಕಂಡಿಷನ್. ಒಂಬತ್ತು ಗಂಟೆ ಒಳಗೆ ಬರಬೇಕು."

"ಆಗಲಪ್ಪ—ನಡೀರಿ, ಹೊತ್ತಾಯಿತು."

ಹೊರಟದ್ದೇನೋ ಆಯಿತು. ಆದರೆ ಹಿಂದಿರುಗುವಾಗ ಕಾರು ಕೆಟ್ಟು ಹೋಯಿತು. ತಿಂದದ್ದೆಲ್ಲಾ ಅರಗುವವರೆಗೂ ಛಳಿಯಲ್ಲಿ ಅಲೆದಾಡಿದರೂ ಅದು ಬೇರೆ ಸರಿಹೋಗಲಿಲ್ಲ. ಕೊನೆಗೆ ವಿಶ್ವಪ್ರಯತ್ನ ಮಾಡಿ ಅದನ್ನು ಹೊರಡಿಸಿಕೊಂಡು ಹೊರಡುವಹೊತ್ತಿಗೆ ಅಷ್ಟು ಹೊತ್ತಾಯಿತು.

ಅಂತೂ ಇಬ್ಬರಲ್ಲಿಯೂ ಅಸಮಾಧಾನವೇನೋ ಬೆಳೆಯಿತು. ಯಾರೂ ಅದನ್ನು ಹರಿಸಲು ಪ್ರಯತ್ನ ಪಡಲಿಲ್ಲ. "ಕುಸುಮ ಯಾಕೋ ಒಂದು ಬಗೆ ಯಾಗಿದಾಳೆ," ಎಂದುಕೊಂಡ ಶ್ರೀಧರ. ಆದರೆ ಏಕೆಂಬ ಜಿಜ್ಞಾಸೆಗೆ ಹೋಗಲಿಲ್ಲ.

ಗಂಡನು ಕಂಡೂ ಕಾಣದಂತೆ ಉದಾಸೀನನಾಗಿರುವುದು ಕುಸುಮನಿಗೆ ಸಹಿಸಲಿಲ್ಲ. 'ನಾನಾಗಿ ಏಕೆ ಹೇಳಬೇಕು? ಅವರಾಗಿ ಕೇಳಿದಾಗ ಹೇಳಿದ ರಾಯಿತು. ಅದುವರೆಗೂ ಹೀಗೇ ದಿವಸವನ್ನು ತಳ್ಳುವುದು.' ಎಂದುಕೊಂಡಳು.

ದಿನಗಳು ಕಳೆದುವು. ಮನೆಯಲ್ಲಿ ಮಾತಿಲ್ಲ ಕತೆಯಿಲ್ಲ. ಇಬ್ಬರೂ ಯಂತ್ರದಂತೆ ತಮ್ಮ ಕೆಲಸವನ್ನು ಸಾಗಿಸುತ್ತಿದ್ದರು. ಶ್ರೀಧರನಿಗೆ ಮನೆಯಲ್ಲಿ ಬೇಜಾರು. ವಾಸುವೂ ಈ ಕಡೆ ಬಂದಿರಲಿಲ್ಲ. ಅವನನ್ನಾದರೂ ನೋಡಿ ಕೊಂಡು ಬರೋಣವೆಂದು ಅವನ ಮನೆಗೆ ಹೋದ.

ಶ್ರೀಧರನನ್ನು ನೋಡಿದ ಕೂಡಲೇ ವಾಸುವಿಗೆ ಮನೆಯಲ್ಲಿ ಎಲ್ಲವೂ ಸುಸೂತ್ರವಾಗಿ ನಡೆಯುತ್ತಿಲ್ಲವೆಂದು ಗೊತ್ತಾಯಿತು. ಇವನೇ ಹೀಗಿದ್ದ ಮೇಲೆ ಕುಸುಮನ ಸ್ಥಿತಿ ಹೇಗಿರಬಹುದು?

ಇಬ್ಬರೂ ಬಹಳ ಹೊತ್ತು ಮಾತಾಡುತ್ತಿದ್ದರು. ಹಿಂದಿರುಗುವ ಹೊತ್ತಿಗೆ ಶ್ರೀಧರ ಬೇರೆ ಮನುಷ್ಯನಂತಾಗಿದ್ದ. ಅವನ ಕಣ್ಣುಗಳು ತೆರೆದಿದ್ದುವು. ವಾಸು ಅವನಿಗೆ ಹೇಳಿದ,—

"ನೋಡು,—ನಾನು ಅಕ್ಕತಂಗಿಯರೊಡನೆ ಆಡಿ ಬೆಳೆದವನಲ್ಲ. ಆ ದಿವ ಕುಸುಮ ನನ್ನ ತಂಗಿಯಾಗಿರಬಾರದಾಗಿತ್ತೆ? ಎಂದುಕೊಂಡೆ. ಆಗಿದ್ದರೆ ಅವಳ ದುಃಖವನ್ನು ಸ್ವಲ್ಪ ಕಡಿಮೆ ಮಾಡಬಹುದಾಗಿತ್ತು........"

"ಬಾ—ವಾಸು; ಇಬ್ಬರೂ ಕೂಡಿಯೇ ಮನೆಗೆ ಹೋಗೋಣ."

"ಬೇಡ, ನಾನು ನಾಳೆ ಬರುತ್ತೇನೆ. ನೀನು ಹೊರಡು. ಕುಸುಮ ನಿನಗಾಗಿ ಕಾಯುತ್ತಿರಬಹುದು!"

ಶ್ರೀಧರ ಮನೆಗೆ ಬಂದಾಗ ಹೊತ್ತಾಗಿತ್ತು. ಕುಸುಮ ಒಳಗೆ ಏನೋ ಕೆಲಸ ಮಾಡುತ್ತಿದ್ದಳು. ಶ್ರೀಧರ ಬಂದವನೇ ನೆಟ್ಟಗೆ ಅವಳ ಬಳಿಗೆ ಹೋಗಿ, ಅವಳ ಕೈಗಳನ್ನು ಹಿಡಿದುಕೊಂಡು,—

"ಕುಸುಮ,—ಕ್ಷಮಿಸು; ತಪ್ಪು ನನ್ನದು," ಎಂದ.

ಕುಸುಮ ಬೆಚ್ಚಿದಳು. ಅವಳ ಕಣ್ಣಿನಿಂದ ನೀರು ಧಾರೆಯಾಗಿ ಹರಿದು, ಇಬ್ಬರ ನಡುವೆಯೂ ಇದ್ದ ತಪ್ಪುತಿಳುವಳಿಕೆಯನ್ನು ಕೊಚ್ಚಿಬಿಟ್ಟಿತು.

    

ಬೆಳಗ್ಗೆ ಎಂಟು ಗಂಟೆ. ಕಾಫಿಯನ್ನು ಮುಗಿಸಿ ಕುಸುಮ ಕಿರುದನಿಯಲ್ಲಿ ಏನೋ ಹಾಡಿಕೊಳ್ಳುತ್ತ ಕೊಠಡಿಗೆ ಬಂದಳು. ಅಲ್ಲಿ ಶ್ರೀಧರನ ಜೊತೆ ವಾಸುವು ಕುಳಿತಿದ್ದನ್ನು ನೋಡಿ ಅವಳಿಗೆ ಬಹಳ ನಾಚಿಕೆಯಾಯಿತು. ಹಿಂದಕ್ಕೆ ಹೊರಡುವ ಪ್ರಯತ್ನದಲ್ಲಿದ್ದಾಗ, ಶ್ರೀಧರ ಅವಳನ್ನು ತಡೆದು,— "ಕುಸುಮ ನಿಮ್ಮಣ್ಣ ಬಂದಿದಾನೆ! ಕಾಫಿ ಏನಾದರೂ ಉಂಟೊ?" ಎಂದು ಕೇಳಿದ.

ಕುಸುಮ ನಕ್ಕಳು. ನಾಚಿಕೆಯನ್ನೂ ಮೀರಿದ ಭಾವವು ಅದರಲ್ಲಿ ಕಾಣಿಸಿತು. ಅವಳು ಮತ್ತೇನೂ ಹೇಳದೆ ಕಾಫಿಯನ್ನು ತರಲು ಒಳಗೆ ಹೋದಳು.

---

## ತುಂಗ—ಭದ್ರ

ಪ್ರಶಾಂತವಾದ ನದೀತೀರ. ಎಲ್ಲಿಯೋ ಹುಟ್ಟಿ ಎಲ್ಲೆಲ್ಲಿಯೋ ಹರಿದು ಒಂದೆಡೆ ಸಂಧಿಸುವ ಎರಡು ನದಿಗಳು. ಎದುರಿಗೆ ಸಂಗಮೇಶ್ವರನ ಗುಡಿ. ಸುತ್ತಲೂ ಮಾವಿನತೋಪು. ದೂರದಲ್ಲಿದ್ದ ಗುಡ್ಡಗಳ ಸಾಲು—ಆ ಎಲ್ಲ ಸೌಂದರ್ಯಕ್ಕೆ ಹಿನ್ನೆಲೆಯಂತೆ ಒಪ್ಪುತ್ತಿತ್ತು. ನದಿಯಲ್ಲಿ ಬಂಡೆಗಳಿರಲಿಲ್ಲ. ಮರಳಮೇಲೆ ಗಂಭೀರವಾಗಿ ಹರಿಯುವ ನದಿಯಮೇಲೆ ಸಂಜೆಯ ಬಿಸಿಲು ಥಳಥಳನೆ ಹೊಳೆಯುತ್ತಿತ್ತು.

ಊರೇನೂ ಸಣ್ಣದಲ್ಲ. ಆದರೂ ಅಷ್ಟುಗಲಾಟೆ, ಆಡಂಬರ, ಆ ಜನ, ಸಾಲುಗಟ್ಟಿ ನಿಂತಿದ್ದ ಮೋಟಾರುಗಳು,—ಇವೆಲ್ಲ ಹೊಸದು. ಆ ದಿನ ಹೊಸದಾಗಿ ಕಟ್ಟಿದ್ದ ಅಣೆಕಟ್ಟಿನ ಆರಂಭೋತ್ಸವ. ಸರ್ಕಾರದ ಉನ್ನತಾಧಿಕಾರಿಗಳೊಬ್ಬರು ಅದಕ್ಕಾಗಿ ಬಂದಿದ್ದರು. ತೋಪಿನ ಬಳಿ ಹಾಕಿದ್ದ ದೊಡ್ಡ ಗುಡಾರದಲ್ಲಿ ಸಮಾರಂಭವು ಏರ್ಪಾಡಾಗಿತ್ತು; ಜನರು ಕಿಕ್ಕಿರಿದು ನೆರೆದಿದ್ದರು.

ನದೀತೀರದಲ್ಲಿ ಹೆಣ್ಣುಮಗಳೊಬ್ಬಳು ಕುಳಿತು ಕುತೂಹಲದಿಂದ ಆ ಕಡೆ ನೋಡುತ್ತಿದ್ದಳು. ಆ ದಿನದ ಸಮಾರಂಭದಲ್ಲಿ ಅವಳ ಮಗಳು ತನ್ನ ಜೊತೆಯವರೊಡನೆ ಪ್ರಾರ್ಥನೆ, ಸ್ವಾಗತ, ಸಂಗೀತ—ಈ ಕಾರ್ಯಕ್ರಮಗಳ ಭಾರವನ್ನು ವಹಿಸಿದ್ದಳು. ಅದು ಇತರರಿಗೆ ದೊಡ್ಡ ವಿಷಯವಲ್ಲವಾದರೂ, ಅವಳಿಗೆ ಹೆಚ್ಚಿನದು. ಸ್ವಯಂ ಸುಬೇದಾರರೇ ಅವರ ಮನೆಗೆ ಹೋಗಿ ಹುಡುಗಿಯನ್ನು ಕಳಿಸುವಂತೆ ಹೇಳಿ, "ವಿಜಯ" ಬರದಿದ್ದರೆ ಆ ದಿನದ ಕೆಲಸ ಜಯಪ್ರದವಾಗುವಂತೇ ಇಲ್ಲವೆಂದು ಹೇಳಿದ್ದರು. ಅದೂ ಸಾಧಾರಣದ ಮಾತಲ್ಲ!

ಹುಡುಗಿ ತನ್ನ ಪಾಲಿನ ಕೆಲಸವನ್ನು ಚೆನ್ನಾಗಿ ನಿರ್ವಹಿಸಿದಳು. ಬಂದಿದ್ದವರು ಹುಡುಗಿಯ ಮಧುರ ಗಾನವನ್ನು ಕೇಳಿ ಸಂತೋಷ ಪಟ್ಟರು. ಅಂದಿನ ಕಾರ್ಯಕ್ರಮದಲ್ಲಿ ಪರದೇಶದಿಂದ ಆಗ ತಾನೆ ಬಂದಿದ್ದ ಸಾಹೇಬರ ಭಾಷಣ ಮುಖ್ಯವಾದದ್ದು. ವ್ಯವಸಾಯಿಕ ವಿಷಯಗಳಲ್ಲಿ ಪರಿಶೀಲನೆ ನಡಿಸಿ ಅಣೆಕಟ್ಟಿನ ಸೌಲಭ್ಯವು ಎಲ್ಲರಿಗೂ ದೊರೆಯುವಂತೆ ಮಾಡುವ ಉದ್ದೇಶದಿಂದ ಸರ್ಕಾರದವರು ವಿಶೇಷ ಮೆಹನತ್ತು ಮಾಡಿ ಅವರನ್ನು ಕೆಲವು ದಿನಗಳ ಮಟ್ಟಿಗೆ ಕರೆಸಿಕೊಂಡಿದ್ದರು. ಹುಡುಗಿಯು ಹಾಡುತ್ತಿದ್ದಾಗ ಸಾಹೇಬರು ಹುಸಿನಗೆಯಿಂದ ಅವಳನ್ನೇ ನೋಡುತ್ತಿದ್ದರು. ಹಾಡು ಮುಗಿದರೂ ಅವರು ನೋಡುವುದನ್ನು ಬಿಡಲಿಲ್ಲ.

ಹುಡುಗಿಯೊಬ್ಬಳು ವಿಜಯನನ್ನು ಮೆಲ್ಲಗೆ ಚಿವುಟಿ,—"ನೋಡು! ಸಾಹೇಬರು ನಿನ್ನನ್ನು ಹೇಗೆ ನೋಡುತ್ತಿದ್ದಾರೆ!" ಎಂದಳು. ವಿಜಯ ಕೀಟಲೆಯ ನಗುವನ್ನು ಬೀರುತ್ತ, "ಎಲ್ಲೋ ಹೊಸದಾಗಿ ವಿಲಾಯತಿಯಿಂದ ಬಂದ ಸರಕೆಂದು ತೋರುತ್ತದೆ. ಹಿಂದೂ ಹೆಂಗಸರನ್ನು ನೋಡಿಲ್ಲವೇನೋ?" ಎಂದಳು.

"ಅಲ್ಲವೇ—ವಿಜಯ, ನಾನು ಕೇಳಿದ್ದರಲ್ಲಿ ಅವರು ಇಲ್ಲಿಯವರೇ ಅಂತೆ, ಪರದೇಶಕ್ಕೆ ಹೋಗಿ ದೊಡ್ಡ ಪರೀಕ್ಷೆ ಮಾಡಿದಾರಂತೆ,—ಇನ್ನೂ ಕೆಲವು ದಿವಸ ಇಲ್ಲೇ ತೋಪಿನ ಬಳಿ ಇರುವ ಬಂಗಲೆಯಲ್ಲಿ ಇರುತ್ತಾರಂತೆ? ಅದಕ್ಕೇ ಆ ಹಳೇ ಮನೆಗೆ ಅಷ್ಟೊಂದು ರಿಪೇರಿ ಮಾಡಿದ್ದು."

“ವೇಷವೇನೋ ಅವರದ್ದೇ ಇದೆ,—ಆದರೆ ಮುಖ ಮಾತ್ರ ಹಾಗೆ ಕಾಣುವುದಿಲ್ಲ.”

“ಹಾಗೆ ಹೇಳಬೇಡ. ನಾನು ಬರುವಾಗ ಬಂಗಲೆಯ ಕಡೆಯಿಂದಲೇ ಬಂದೆ. ಬಾಗಿಲಲ್ಲಿ ಒಬ್ಬ ಹುಡುಗ ನಿಂತಿದ್ದ. ಅವನನ್ನು ನೋಡಿದರೆ ಅನುಮಾನವುಳಿಯುವುದಿಲ್ಲ,—ಅಚ್ಚ ಕೆಂಪು ಮುಖ.”

ಹುಡುಗಿಯರು ಮಾತಾಡುತ್ತ ಅವರ ಕಡೆಗೇ ನೋಡುತ್ತಿದ್ದುದರಿಂದ, ಸಾಹೇಬರಿಗೆ ತಮ್ಮ ವಿಚಾರವೇ ಮಾತಾಡುತ್ತಿರಬಹುದೆಂದು ತೋರಿತು. ಹುಡುಗಿಯರು ಸಹಜ ಕುತೂಹಲದಿಂದ ಮಾತಾಡುತ್ತಿದ್ದರೂ, ಸಾಹೇಬರ ಮನಸ್ಸಿನ ಗೊಂದಲದಲ್ಲಿ ಬೇರೆ ಅರ್ಥವೇ ತೋರುತ್ತಿತ್ತು. ‘ಅಂತೂ ಒಮ್ಮೆ ಸಮಾರಂಭವು ಕೊನೆಗೊಂಡಿವರೆ, ಗುಮಾಸ್ತೆಯ ಮೂಲಕ ಹುಡುಗಿಯು ಯಾರೆಂದು ವಿಚಾರಿಸುವುದು’ ಎಂದುಕೊಂಡರು.

ಹುಡುಗಿಯು ಸಂತೋಷದಿಂದ ಮನೆಯ ಕಡೆ ಹೊರಟು ದಾರಿಯಲ್ಲಿ ತನಗಾಗಿ ಕಾಯುತ್ತಿದ್ದ ತಾಯಿಯನ್ನು ಸಂಧಿಸಿ,—ತನ್ನ ಹಾಡಿಗೆ ದೊರೆತ ಮನ್ನಣೆಯನ್ನೂ, ಇತರ ವಿಚಾರಗಳನ್ನೂ ಉತ್ಸಾಹದಿಂದ ವರ್ಣಿಸಿದಳು. ಸಾಹೇಬರು ಎವೆಯಿಕ್ಕದೆ ತನ್ನನ್ನೇ ನೋಡುತಿದ್ದುದನ್ನೂ ಹೇಳುವುದಕ್ಕೆ ಮರೆಯಲಿಲ್ಲ.

೨

ವಿಜಯ ಸಾಯಂಕಾಲದಲ್ಲಿ ಗೆಳತಿಯ ಮನೆಯಿಂದ ತನ್ನ ಮನೆಗೆ ಬರುತ್ತಿದ್ದಳು. ಬರಬೇಕಾದರೆ ತೋಪನ್ನು ದಾಟಿಯೇ ಬರಬೇಕು. ಆ ದಿನ ಆ ಜಾಗ ಎಂದಿನಂತೆ ಶಾಂತಿಯಿಂದ ತುಂಬಿತ್ತು. ಆಗ ನೋಡಿದರೆ ಹಿಂದಿನ ದಿನ ಅಲ್ಲಿದ್ದ ಗುಡಾರ,—ಸೇರಿದ್ದ ಜನ, ಎಲ್ಲವೂ ಕನಸೋ ಎನ್ನುವಂತಿತ್ತು.

‘ಎಷ್ಟು ಬೇಗ ಎಲ್ಲವನ್ನೂ ತೆಗೆದುಬಿಟ್ಟಿದಾರೆ!’ ಎಂದುಕೊಂಡು ಹುಡುಗಿ ನಿಧಾನವಾಗಿ ನಡೆದುಬರುತ್ತಿದ್ದಳು. ಬೇಗ ಬರಬೇಕೆಂದು ತಾಯಿಯು ಹೇಳಿದ್ದ ಮಾತು ನೆನಪಿಗೆ ಬರುತ್ತಿದ್ದರೂ, ಹುಡುಗಿಯು ಗೆಳತಿಯ ಮನೆಯನ್ನು ಬಿಡುವ ಹೊತ್ತಿಗೇ ಹೊತ್ತು ಇಳಿಯುತ್ತಿತ್ತು.

ಸ್ನೇಹಿತರಿಬ್ಬರು ಒಂದು ಕಡೆ ಸೇರಿದರೆ ಗಂಟೆ ನೋಡಿ ಮಾತು ಮುಗಿಸು

ವುದು ಯಾವಾಗಲೂ ಕಷ್ಟ. ಅವರಲ್ಲೂ ಮಾತಿಗೆ ಒಂದು ಹೊಸ ವಿಷಯವು ಸಿಕ್ಕಿರುವಾಗ ಹೇಳುವಂತೆಯೇ ಇಲ್ಲ. ಸಾಮಾನ್ಯವಾಗಿ ಅಪರೂಪದ ಸಮಾರಂಭಗಳು ನಡೆದರೆ ಜನರು ಅದೇ ವಿಚಾರವಾಗಿ ಐದಾರು ದಿವಸಗಳಾದರೂ ಒಬ್ಬರನ್ನೊಬ್ಬರು ಸಂಧಿಸಿದಾಗ ಮಾತಾಡುವುದು ಸಹಜ. ಆ ಹುಡುಗಿಯರೂ ಹಾಗೆಯೇ ಮಾಡಿದ್ದರು.

ಪೋಸನ್ನು ದಾಟಿದ ಕೂಡಲೇ ಗೂರವಪ್ಲಿ ಸಾಹೇಬರ ಮನೆ ಕಾಣಿಸಿತು. ಆವರಣದ ಗೋಡೆಯ ಒಳಗಿನಿಂದ ಹೂಗಿಡಗಳು ಕಾಣಿಸಿದುವು. ದೊಡ್ಡದಾದ ಹೂಗಳು ಸಂಜೆಯ ಗಾಳಿಗೆ ಬಳುಕುತ್ತ ಇದ್ದುವು. ಹುಡುಗಿ ಅಚ್ಚರಿಯಿಂದ ನೋಡುತ್ತ,—ಎರಡು ದಿನಗಳ ಹಿಂದೆ ಬೆಂಗಾಡಿನಂತೆ ಇದ್ದ ಜಾಗದಲ್ಲಿ ಇಷ್ಟು ಬೇಗ ಹೂವುಗಳು ಹೇಗೆ ಬೆಳೆದವೆಂದು ಯೋಚಿಸಿ, ಸಾಹೇಬರ ಅಭಿರುಚಿಯನ್ನು ಮನಸ್ಸಿನಲ್ಲಿಯೇ ಹೊಗಳಿದಳು.

“ ನಮಸ್ಕಾರ.... ಕುಮಾರಿ........”

ಹುಡುಗಿ ಬೆಚ್ಚಿ ಹಿಂದಿರುಗಿ ನೋಡಿದಳು. ಸಾಹೇಬರು ತಿರುಗಾಡಲಿಕ್ಕೆ ಹೋಗಿದ್ದವರು ಮನೆಗೆ ಹಿಂದಿರುಗುತ್ತಿದ್ದರು. ಅವರ ನೋಟ ಹಿಂದಿನ ದಿನದಂತೆ ಅವಳ ಕಡೆಗೆ ಒಂದೇ ಸಮ ಹರಿಯುತ್ತಿತ್ತು.

ಹುಡುಗಿಯು ನಾಚಿದಂತೆ ಫಕ್ಕನೆ ಕಣ್ಣರಳಿಸಿ ನಾಲ್ಕು ಕಡೆಗೂ ನೋಡಿದಳು. ಸುತ್ತಲೂ ಯಾರೂ ಕಾಣಲಿಲ್ಲ. ಎದುರಿಗೆ ಮೆಲ್ಲಗೆ ಹರಿಯುತ್ತಿರುವ ನದಿ. ಹುಡುಗಿ ಬೆವರಿದಳು. ಆದರೂ ಅದನ್ನು ತೋರ್ಪಡಿಸದೆ, ಮುಗುಳ್ನಗೆಯನ್ನು ಸೂಸುತ್ತ,—“ ನಮಸ್ಕಾರ ” ಎಂದಳು.

“ ನೀನೆ ಅಲ್ಲವೇ ಕುಮಾರಿ ನಿನ್ನೆ ಹಾಡಿದವಳು .......? ”

“ ಹೌದು. ”

“ ನೀನು ಬಹಳ ಚೆನ್ನಾಗಿ ಹಾಡಿದೆ ಕುಮಾರಿ ! ”

“ ತಾವು,.... ನಮ್ಮ ದೇಶಭಾಷೆ ಚೆನ್ನಾಗಿ ಆಡುತ್ತೀರಿ ! ”

“ ಹೌದು, ಕುಮಾರಿ; ನನಗೆ ಕನ್ನಡ ತಿಳಿಯುತ್ತದೆ. ”

ಹುಡುಗಿಯು ಮಾತಾಡುತ್ತ ಮುಂದೆ ಸಾಗಿದಳು. ಸಾಹೇಬರೂ ಅವಳ ಜೊತೆಗೆ ನಡೆಯುತ್ತಿದ್ದರು.

" ನೀವು ಎರಡು ದಿನಗಳಲ್ಲಿ ಅಷ್ಟು ಗಿಡಗಳನ್ನು ಹೇಗೆ ಬೆಳಿಸಿದಿರೋ ತಿಳಿಯದು. ಆ ಹೂವುಗಳಿಂದ ಮನೆಗೆ ಹೊಸ ಸೌಂದರ್ಯ ಬಂದಂತಾಗಿದೆ! "

" ಬೆಳೆದ ಗಿಡಗಳನ್ನೇ ದೊಡ್ಡ ಕುಂಡಗಳಲ್ಲಿಟ್ಟು ತಂದೆವು. ನಿನಗೆ ಹೂವು ಇಷ್ಟವೆಂದು ಕಾಣುತ್ತೆ ! ಕುಮಾರಿ, ಅಲ್ಲಿಯವರಿಗೆ ಬಂದರೆ ಗೋಡೆಯ ಹೊರಗೇ ನಿಂತುಕೊಂಡು ಕೈಗೆ ಸಿಕ್ಕುವ ಒಂದೆರಡು ಹೂವುಗಳನ್ನು ಕಿತ್ತು ಕೊಡುತ್ತೇನೆ. "

" ತಾವು ಹಾಗೆ ಹೇಳಿದ್ದು ಬಹಳ ಸಂತೋಷ. ಆದರೆ ನನಗೆ ಹುವು ಬೇಡ. ಅವು ಅಲ್ಲೇ ಇದ್ದರೇ ನೋಡುವುದಕ್ಕೆ ಚೆನ್ನಾಗಿರುತ್ತದೆ........"

" ಹಾಗಲ್ಲ,—ಕುಮಾರಿ, ನನ್ನ ಅಭಿಪ್ರಾಯ ಹೇಳಲೇ ? ಹೂವು ಗಿಡದಲ್ಲಿರುವಾಗ ಅಂದವಾಗಿ ಕಾಣುತ್ತದೆ; ನಿಜ ! ಆದರೆ ಅದು ಎರಡು ದಿನಗಳಿಂದ ನೋಡುವವರ ಕಣ್ಣಿಗೆ ಅಂದವನ್ನು ಬೀರಿ ತೃಪ್ತಿಪಡಿಸಿದೆ. ಇಂದಲ್ಲ—ನಾಳೆ ಅದು ಬಾಡದೇ ಇರುವುದಿಲ್ಲ. ಹೂವನ್ನು ನಾಚಿಸುವ ನಿನ್ನಂತಹ ಸುಂದರಿಯ ಮುಡಿಯಲ್ಲಿ ಅದು ಇನ್ನೂ ಚೆನ್ನಾಗಿ ಒಪ್ಪುವುದು ! ಚಾ,—ಕುಮಾರಿ; ಬರಲು ಅಡ್ಡಿ ಏನೂ ಇಲ್ಲವಷ್ಟೆ ? "

ಹುಡುಗಿಯ ವಿವೇಕವು ಹೋಗುವುದು ಸರಿಯಲ್ಲವೆಂದು ಬೋಧಿಸಿದರೂ, ಹೆಣ್ಣಿನ ಹೃದಯವು ಹೊಗಳಿಕೆಗೆ ಮರುಳಾಗದೆ ಇರಲಿಲ್ಲ.

" ಅಡ್ಡಿ ಏನೂ ಇಲ್ಲ...." ಎಂದು ಹೇಳಿ ಹುಡುಗಿಯು ಎರಡನೆ ಯೋಚನೆಯು ಬರುವುದರೊಳಗೆ ಸಾಹೇಬರೊಡನೆ ಅವರ ಮನೆಕಡೆ ನಡೆದಿದ್ದಳು.

ಸಾಹೇಬರು ಹುಡುಗಿಯು ಅಷ್ಟು ಸುಲಭವಾಗಿ ಬರಲು ಒಪ್ಪಿದ್ದನ್ನು ನೋಡಿ ಸಂತೋಷದಿಂದ ಮಾತು ಮುಂದುವರಿಸಿದರು,—

" ಇಷ್ಟು ಹೊತ್ತಿನಲ್ಲಿ ! ಈ ಕಡೆ ಎಲ್ಲಿ ಹೊರಟಿದ್ದೆ ? " ಕುಮಾರಿ.

" ನನ್ನ ಗೆಳತಿಯ ಮನೆಯಿಂದ ಮನೆಗೆ ಹೋಗುತ್ತಿದ್ದೆ. "

" ಕುಮಾರಿ,—ನಿನ್ನ ಹೆಸರು !........ಇದುವರೆಗೂ ಗೊತ್ತಾಗಲಿಲ್ಲ ! "

" ವಿಜಯಲಕ್ಷ್ಮಿ. "

" ಎಷ್ಟು ಮುದ್ದಾದ ಹೆಸರು ! ನಿಮ್ಮ ತಾಯಿಯ ಹೆಸರಿಗಿಂತ ಒಂದಕ್ಷರ ಹೆಚ್ಚು. ಅಷ್ಟೆ ! "

ಹುಡುಗಿಯು ಬೆರಗಾಗಿ,—"ತಮಗೆ ಹೇಗೆ ಗೊತ್ತು, ನಮ್ಮ ತಾಯಿಯ ಹೆಸರು!" ಎಂದಳು.

ಸಾಹೇಬರು ನಾಲಿಗೆ ಕಚ್ಚಿದರು. ನಗುವಿನಲ್ಲಿ ತಪ್ಪನ್ನು ಮರೆಮಾಡುತ್ತ, "ನಮ್ಮಲ್ಲಿ ಹಾಗೆ ತಾಯಿ-ತಂದೆಗಳ ಹೆಸರಿನ ಮೇಲೆ ಮಕ್ಕಳಿಗೆ ಹೆಸರಿಡುವ ರೂಢಿ ಇದೆ; ಅದರ ಮೇಲೆ ಹೇಳಿದೆ. ನನ್ನ ಊಹೆ ನಿಜವೆ?"

"ನಿಜ........"

ಸಾಹೇಬರು ಆ ವೇಳೆಗೆ ಹೆಬ್ಬಾಗಿಲ ಬಳಿ ಬಂದಿದ್ದರು. ಅವರು ಹೇಳಿದ್ದಂತೆ ಹೊರಗಡೆ ನಿಂತು ಹೂವು ಕೊಯ್ಯದೆ ನೆಟ್ಟಗೆ ಒಳಗೆ ಹೋದರು. ಹುಡುಗಿಯು ಅದನ್ನು ಗಮನಿಸಿದಂತೆ ತೋರಲಿಲ್ಲ. ಅವರನ್ನು ಹಿಂಬಾಲಿಸಿ ತಾನೂ ಹೋದಳು.

ಸಾಹೇಬರು ಪ್ರತಿಯೊಂದು ಗಿಡದ ಮುಂದೂ ನಿಂತು ಅದರ ವಿಚಾರವನ್ನೆಲ್ಲಾ ವರ್ಣಿಸಿ ಹೇಳುತ್ತ ಮುಂದೆ ನಡೆಯುತ್ತಿದ್ದರು. ಮನೆಯನ್ನು ಒಂದು ಸಲ ಸುತ್ತುವ ವೇಳೆಗೆ ಹುಡುಗಿಯು ಹೊರಲಾರದಷ್ಟು ಹೂವು ಅವಳ ಕೈಲಿ ಶೇಖರವಾಗಿತ್ತು. ಅವಳು ಸಂತೋಷದಿಂದ ಅವರನ್ನು ವಂದಿಸಿ, "ನನ್ನಿಂದ ತಮಗೆ ಬಹಳ ತೊಂದರೆಯಾಯಿತು. ನಾನಿನ್ನು ಹೊರಡುತ್ತೇನೆ" ಎಂದಳು.

"ಒಳಗೆ ಬರಬಾರದೆ ಕುಮಾರಿ? ಹೇಗಿದ್ದರೂ ಇಲ್ಲಿಯವರೆಗೂ ಬಂದಿದ್ದೀ! ನನ್ನ ಮಗನ ಪರಿಚಯ ಮಾಡಿಕೊಡುತ್ತೇನೆ. ಇಲ್ಲಿ ಬಂದಾಗಿನಿಂದಲೂ ಜೊತೆಯವರಿಲ್ಲದೆ,—ಮಗು ಬಹಳ ಬೇಸರಗೊಂಡಿದಾನೆ. ನಿನ್ನಂತಹ ಗೆಳತಿಯ ಪರಿಚಯವಾದದ್ದು ಬಹಳ ಸಂತೋಷ."

ಸಾಹೇಬರು ಆತುರದಿಂದ ಅವಳ ಉತ್ತರವನ್ನು ನಿರೀಕ್ಷಿಸುತ್ತಿದ್ದರು. ಆ ನೋಟದಲ್ಲಿ ಏನಿತ್ತೋ! ಹುಡುಗಿಯು ತಾನು ಬರುವುದಿಲ್ಲವೆಂದು ಹೇಳುವೆನೆಂದುಕೊಂಡ ನಿರ್ಧಾರವು ಮನಸ್ಸಿನಲ್ಲೇ ನಿಂತಿತು. "ಬರುತ್ತೇನೆ. ಆದರೆ ನನ್ನನ್ನು ದಯವಿಟ್ಟು ಬೇಗ ಕಳಿಸಿಕೊಡಬೇಕು. ನಮ್ಮ ತಾಯಿ ಕಾದಿರುತ್ತಾರೆ" ಎಂದು ಹೇಳಿ ಒಳಗೆ ಹೋದಳು.

ಮನೆ ಹಳೆಯತರದ್ದಾದರೂ ಬಹಳ ಅಂದವಾಗಿ ಅಲಂಕರಿಸಲ್ಪಟ್ಟಿತ್ತು.

ಅಂತೂ ಹುಡುಗಿಯ ಮನಸ್ಸಿಗೆ ಹಾಗೆ ತೋರಿತು. ಅವಳು ಅದುವರೆಗೆ ಅಷ್ಟುಮಟ್ಟಿಗೆ ಸುಸಜ್ಜಿತವಾದ ಕೋಣೆಯನ್ನು ನೋಡಿರಲಿಲ್ಲ. ಬೆರಗು ಗಣ್ಣುಗಳಿಂದ ಸುತ್ತಲೂ ನೋಡುತ್ತಿದ್ದಳು. ಸಾಹೇಬರು ಅವಳನ್ನು ದೊಡ್ಡದಾದ ಒಂದು ಸೋಫಾದ ಮೇಲೆ ಕುಳಿತುಕೊಳ್ಳ ಹೇಳಿ,—ಎದುರಿಗೆ ಒಂದು ಕುರ್ಚಿಯ ಮೇಲೆ ತಾವೂ ಕುಳಿತರು. ಗೋಡೆಯ ಮೇಲೆ ದೊಡ್ಡ ದೊಡ್ಡ ಚಿತ್ರಪಟಗಳಿದ್ದುವು. ಆದರಲ್ಲಿ ಒಂದು ಚಿತ್ರವನ್ನು ಹುಡುಗಿ ದಿಟ್ಟಿಸಿ ನೋಡುತ್ತಿದ್ದಳು. ಸಾಹೇಬರ ಮನೆಯಲ್ಲಿ ಹಿಂದೂ ಬಾಲೆಯ ಚಿತ್ರ! ಅದರಲ್ಲಿ ಮುಖ ಬೇರೆ ಯಾರನ್ನೋ ನೆನಪು ಮಾಡಿಕೊಡುವಂತಿದೆ!

ಸೇವಕನು ದೊಡ್ಡ ತಟ್ಟೆಯಲ್ಲಿ ಬಿಸ್ಕೀಟುಗಳನ್ನು ಟೀಯನ್ನೂ ತಂದು ಮುಂದೆ ಇಟ್ಟನು. ಸಾಹೇಬರು ಬಟ್ಟಲಿಗೆ ಬಗ್ಗಿಸಿ,—"ಕುಮಾರಿ, ಸ್ವಲ್ಪ ಚಹಾ ತೆಗೆದುಕೋ; ಮಗು ಆಡುವುದಕ್ಕೆ ಹೋಗಿದಾನೆ; ಇನ್ನೇನು ಬರುವ ಸಮಯ,—" ಎಂದರು.

ಹುಡುಗಿಯು ಚಿತ್ರದಲ್ಲಿ ಬೆಸ್ಸೆಟ್ಟಿದ್ದ ನೋಟವನ್ನು ಹಿಂದಿರುಗಿಸಿ,—"ಕ್ಷಮಿಸಬೇಕು—ನಾನು ಏನೂ ತೆಗೆದುಕೊಳ್ಳುವುದಿಲ್ಲ," ಎಂದು ಮರ್ಯಾದೆಯಿಂದ ಕೂಡಿದ್ದರೂ ಖಂಡಿತವಾದ ದನಿಯಲ್ಲಿ ಹೇಳಿದಳು.

"ಏಕೆ—ಕುಮಾರಿ? ನಮ್ಮ ಮನೆಯಲ್ಲಿ ತೆಗೆದುಕೊಳ್ಳಬಾರದೆಂದೋ?"

"ಹೌದು...."

ಸಾಹೇಬರು ನಗುತ್ತ,—"ನಿಮ್ಮ ತಾಯಿ ನಿನಗೆ ಮತೀಯ ಶಿಕ್ಷಣವನ್ನು ಬಹಳ ಶಿಸ್ತಿನಿಂದ ಕೊಟ್ಟಿರುವಂತಿದೆ" ಎಂದರು.

ಹುಡುಗಿಯು ಏನೂ ಹೇಳಲಿಲ್ಲ. ಶಿಕ್ಷಣವೆನ್ನುತ್ತಲೆ ಅವಳ ಮುಖ ಪೆಚ್ಚಾಯಿತು. ಕಂಡುಕೇಳಿ ಅರಿಯದ ಮನುಷ್ಯನೊಡನೆ ತಾನು ಒಬ್ಬಳೇ ಹೂವಿನ ಆಸೆಗಾಗಿ ಬಂದು ಅವನ ಮನೆಯಲ್ಲಿ ಕಾಲ ಕಳೆದದ್ದು ತಿಳಿದರೆ ತಾಯಿ ಏನೆಂದುಕೊಳ್ಳುವಳೋ ಎಂದು ಮಿಡುಕಿದಳು. 'ನಾನು ಏತಕ್ಕಾಗಿ ಬಂದೆ? ಹೂವಿಗಾಗಿಯೇ?' ಎಂದುಕೊಂಡು, ಪಕ್ಕದಲ್ಲಿ ರಾಶಿಯಾಗಿ ಬಿದ್ದಿದ್ದ ಹೂವಿನ ಕಡೆ ವ್ಯಾಕುಲತೆಯಿಂದ ನೋಡಿದಳು. ಅವನ್ನೆಲ್ಲಾ ಒಂದೇ ಸಲ ಎಸೆದು

ಬಿಟ್ಟರೂ ಅವಳಿಗೆ ವ್ಯಥೆಯಾಗುವಂತೆ ತೋರಲಿಲ್ಲ. ಹಾಗಾದರೆ ಬಂದುದು ಅದಕ್ಕಾಗಿ ಅಲ್ಲ! ಮತ್ತೇಕೆ........?

ಆ ಪ್ರಶ್ನೆಗೆ ಉತ್ತರ ಸಿಗಲಿಲ್ಲ. ಹುಡುಗಿ ಕಳವಳದಿಂದ ತಟಕ್ಕನೆ ಎದ್ದು ನಿಂತು;—"ನಾನಿನ್ನು ಹೋಗುತ್ತೇನೆ. ತಮ್ಮ ಮಗ ಬರುವುದು ಹೊತ್ತಾಗಬಹುದು" ಎಂದಳು.

ಸಾಹೇಬರು ಕೈಲಿದ್ದ ಚಹದ ಬಟ್ಟಲನ್ನು ಕೆಳಗಿಟ್ಟು, ಅವಳು ಹೋಗುವುದನ್ನು ನಿರೋಧಿಸುವಂತೆ ಕೈಯನ್ನು ಅಡ್ಡಗಟ್ಟಿ,—"ಬೇಡ—ಕುಮಾರಿ. ಇನ್ನು ಸ್ವಲ್ಪ ಇರು. ನಾನು ಆಳನ್ನು ಕಳುಹಿಸಿದೇನೆ. ಬಾ ಈ ಕಿಟಕಿಯಲ್ಲಿ ನೋಡೋಣ. ಅವನು ಬರುವುದು ಕಾಣದಿದ್ದರೆ, ನೀನು ಹೋಗುವಿಯಂತೆ" ಎಂದು ಹೇಳಿ ಎದುರಿನ ಕೋಣೆಗೆ ಹೋದರು. ಹುಡುಗಿಗೆ ಮತ್ತೇನು ಹೇಳಲೂ ತೋರದೆ ಅವರನ್ನು ಹಿಂಬಾಲಿಸಿ ಹೋದಳು.

ಇಬ್ಬರೂ ಕಿಟಕಿಯಿಂದ ಹೊರಗೆ ನೋಡಿದರು. ದೂರದಲ್ಲಿ ನದಿಯ ಕಡೆಯಿಂದ ಹುಡುಗನು ಬರುತ್ತಿರುವುದು ಕಾಣಿಸಿತು. ಇನ್ನು ಉಪಾಯವಿಲ್ಲ! ಅವನು ಬರುವವರೆಗೂ ಕಾಯಲೇಬೇಕು!

ಸಾಹೇಬರು ಅಲ್ಲಿಯೇ ಇದ್ದ ಮೇಜಿನಮೇಲೆ ಕುಳಿತುಕೊಂಡರು. ಹುಡುಗಿ ಕಿಟಕಿಯ ಬಳಿ ನಿಂತುಕೊಂಡು ಹೊರಗೆ ನೋಡುತ್ತಿದ್ದಳು. ನದಿಯ ಕಡೆಯಿಂದ ತಂಗಾಳಿ ಬೀಸುತ್ತಿತ್ತು. ಎದುರಿಗೆ ಗುಡ್ಡವನ್ನು ಬಳಸಿ ಬಂದು ಸಂಧಿಸುವ ನದಿಯ ಸಂಗಮ ಸ್ಥಳ!

ಹುಡುಗಿಯು ಸುಮ್ಮನಿದ್ದುದನ್ನು ನೋಡಿ ಸಾಹೇಬರು,—"ಕುಮಾರಿ, ನಿನ್ನನ್ನು ನೋಡಿದರೆ ನನಗೆ ನಿನ್ನ ಮನೆಯವರೆಲ್ಲರ ಪರಿಚಯ ಮಾಡಿಕೊಳ್ಳಬೇಕೆಂದು ಇಷ್ಟವಾಗುತ್ತದೆ. ನನಗೆ ಇಲ್ಲಿ ಗುರುತಿನವರು ಯಾರೂ ಇಲ್ಲ. ಒಂದು ದಿವಸ ನಿನ್ನೊಡನೆ ಬರುತ್ತೇನೆ. ನಿಮ್ಮ ತಾಯಿ-ತಂದೆಗಳ ಪರಿಚಯ ಮಾಡಿಸುವಿಯಾ?" ಎಂದು ಕೇಳಿದರು.

ಹುಡುಗಿಯು ಅನುಮಾನಿಸುತ್ತ,—"ಕ್ಷಮಿಸುಬೇಕು ನಮ್ಮ ತಾಯಿ ಯಾರ ಪರಿಚಯ ಮಾಡಿಕೊಳ್ಳುವುದಕ್ಕೂ ಇಷ್ಟಪಡುವುದಿಲ್ಲ. ನಮ್ಮ ತಂದೆ....ಇ....ಲ್ಲ," ಎಂದಳು.

ಸಾಹೇಬರು ಆಶ್ಚರ್ಯದಿಂದ ಕೇಳಿದರು,—

"ತಂದೆ ಇಲ್ಲವೇ?"

"ಇದ್ದಾರೆ. ಆದರೆ....ಇಲ್ಲಿಲ್ಲ...."

"ಎಲ್ಲಿದಾರೆ?"

ಪುನಃ ಅದೇ ಪ್ರಶ್ನೆ! ಅವಳಿಗೆ ತಿಳುವಳಿಕೆ ಬಂದಾಗಿನಿಂದಲೂ ಆ ಪ್ರಶ್ನೆಗೆ ಉತ್ತರ ಕೊಟ್ಟು ಕೊಟ್ಟು ಬೇಜಾರಾಗಿತ್ತು. ಹುಡುಗಿಗೆ ಗೊತ್ತು. ಅದೊಂದು ಮಾತಿಗೆ ಉತ್ತರ ಕೊಟ್ಟರೆ, ಪ್ರಶ್ನೆಗಳ ಪರಂಪರೆಯೇ ಹಿಂದಿನಿಂದ್ದ ಬರುವುದೆಂದು! ಅವಳು ತೀರ ಚಿಕ್ಕವಳಿದ್ದಾಗ ಆ ಮಾತಿಗೆ ಬಹಳ ಹೆಮ್ಮೆ ಯಿಂದ ಉತ್ತರ ಕೊಡುತ್ತಿದ್ದಳು. ತಿಳುವಳಿಕೆ ಬರುವ ಹೊತ್ತಿಗೆ,—ಪರದೇಶಕ್ಕೆ ಪ್ರೌಢವ್ಯಾಸಂಗಕ್ಕೆಂದು ಹೋಗಿದ್ದ ತಂದೆಯು ಹಿಂದಿರುಗಿ ಬಂದು ದೊಡ್ಡ ಅಧಿಕಾರ ಮಾಡುತ್ತಾ,—ತಾವು ಸಂತೋಷವಾಗಿರುವೆವೆಂಬ ಆಸೆಯು ಆರುತ್ತ ಬಂದಿತು. ಆಗ ತಂದೆಯ ಮಾತು ಕೇಳಿದರೆ, ಅಥವಾ ಜೊತೆಯ ಹುಡುಗಿಯರು ತಮ್ಮ ತಾಯಿ-ತಂದೆಗಳ ವಿಚಾರವಾಗಿ ಮಾತಾಡಿದರೆ, ಹುಡುಗಿಯ ಎಳೆಯ ಹೃದಯವು ಹಿಂಡಿದಂತಾಗಿ ಕಣ್ಣುಗಳಿಂದ ಧಾರೆಧಾರೆಯಾಗಿ ನೀರು ಹರಿದು ಅವಳ ಸುಳಿಗಲ್ಲಗಳಿಂದ ಉರುಳುತ್ತಿತ್ತು.

ಆದರೆ ಈಗ ಅವಳು ಚಿಕ್ಕ ಹುಡುಗಿಯಲ್ಲ; ಅಲ್ಲದೆ ವರ್ಷಗಳ ಕಟು ಅನುಭವ, ಜನರ ಕಟುತರವಾದ ಸಣ್ಣ ಮಾತುಗಳು—ಎಲ್ಲವನ್ನೂ ಕೇಳಿ ಸಹಿಸಿ—ಹೃದಯ ಕಠಿನವಾಗುತ್ತ ಬಂದಿತ್ತು. ಈಗ ಮೊದಲಿನಂತೆ ಕಣ್ಣಲ್ಲಿ ನೀರೂರದಿದ್ದರೂ, ಎದೆಯ ನೋವು ಮಾತ್ರ ಆರಿರಲಿಲ್ಲ. ಇಷ್ಟು ಮಾತುಗಳನ್ನು ಕೇಳುವುದಕ್ಕಿಂತ "ಇಲ್ಲ"ವೆಂದು ಹೇಳುವುದು, ಅಥವಾ 'ಇಲ್ಲೇ ಇದಾರೆಂದು' ಏನಾದರೊಂದು ಸುಳ್ಳು ಹೇಳುವುದು ಎಷ್ಟು ಸುಖ! ಹಾಗೆ ಹೇಳಬೇಕೆಂದು ಹುಡುಗಿ ಮನಸ್ಸು ನೊಂದಾಗಲೆಲ್ಲಾ ಅಂದುಕೊಳ್ಳುತ್ತಿದ್ದಳು. ಆದರೂ....ಏಕೋ ಹಾಗೆ ಹೇಳುವ ಸಂದರ್ಭ ಬಂದಾಗ ಅವಳಿಗೆ ಅದು ಮರೆತು ಹೋಗಿ, ನಿಜಾಂಶವೇ ಹೊರಬೀಳುತ್ತಿತ್ತು. ಕೊನೆಗೆ ಈ ದಿನ ಈ ಅಪರಿಚಿತನ ಮುಂದಾದರೂ ಹಾಗೆ ಹೇಳಿದ್ದರೆ ಏನಾಗುತ್ತಿತ್ತು? ಹುಡುಗಿ ತನ್ನ ಸ್ವಭಾವಕ್ಕಾಗಿ ತಾನೇ ಧಿಕ್ಕರಿಸಿಕೊಂಡಳು.

"ಕುಮಾರಿ—ವಿಜಯಲಕ್ಷ್ಮಿ! ನಾನು ಆ ಮಾತು ಕೇಳಬಾರದಾಗಿತ್ತು. ನಿನ್ನ ಮನಸ್ಸಿಗೆ ತೊಂದರೆಯಾದಂತಿದೆ!"

"ಇಲ್ಲ—ತೊಂದರೆಯೇನೂ ಇಲ್ಲ! ತಾವು ಹೇಗೂ ಕೆಲವು ದಿವಸ ಇಲ್ಲೇ ಇರುತ್ತೀರಿ. ಇಂದಲ್ಲ ನಾಳೆ ಅದು ತಮಗೆ ತಿಳಿಯುವ ವಿಷಯವೇ! ನಾನು ಎರಡು ದಿವಸ ಮುಂಚೆ ಹೇಳಿದರೆ ನಷ್ಟವೇನು? ನಮ್ಮ ತಂದೆ ವಿದ್ಯಾರ್ಜನೆಗೆಂದು ವಿಲಾಯತಿಗೆ ಹೋದವರು ಇನ್ನೂ ಬಂದಿಲ್ಲ!"

"ಹೋಗಿ ಎಷ್ಟು ದಿವಸಗಳಾಯಿತು?"

"ಹದಿನಾರು ವರ್ಷಗಳಾಗಿ ಹೋಯಿತು. ನಾನು ಹುಟ್ಟುವುದಕ್ಕೆ ಕೆಲವು ದಿವಸಗಳ ಮೊದಲು!"

"ಅಬ್ಬ! ಹದಿನಾರು ವರ್ಷಗಳೇ! ಅಷ್ಟು ದೀರ್ಘಕಾಲ ಅಲ್ಲಿ ಏನು ಮಾಡಬೇಕು? ಅವರು ಅಲ್ಲಿ ಎಲ್ಲಿದ್ದಾರೆ? ಏನು ಮಾಡುತ್ತಿದ್ದಾರೆ?"

"ಗೊತ್ತಿಲ್ಲ; ಅವರ ವಿಚಾರ ನಮಗೆ ಯಾವುದೂ ತಿಳಿಯದು. ಅಲ್ಲಿಂದ ಏನು ಸಮಾಚಾರವೂ ಬರುತ್ತಿಲ್ಲ."

"ಹಾಗಾದರೆ ಅವರು ಇರಲಾರರು! ಇದ್ದಿದ್ದರೆ ಇಷ್ಟು ದಿವಸ ಸಮಾಚಾರ ಕೊಡದೇ ಇರುತ್ತಿದ್ದರೇ?"

ಹುಡುಗಿಯು ಅಸಮಾಧಾನದ ಧ್ವನಿಯಲ್ಲಿ ಹೇಳಿದಳು,—

"ತಾವು ಹಾಗೆ ಹೇಳಬಾರದು. 'ಅವರು ಅಲ್ಲಿ ಸುಖವಾಗಿದ್ದಾರೆ; ಇಂದಲ್ಲ ನಾಳೆ, ಎಂದಾದರೊಂದು ದಿನ ಹಿಂದಿರುಗಿ ಬರುತ್ತಾರೆ' ಎಂಬ ಆಸೆಯಿಂದ ನಾವು ಜೀವನವನ್ನು ಇಷ್ಟುದರಲ್ಲಿ ಹಗುರ ಮಾಡಿಕೊಂಡು ತಳ್ಳುತ್ತಿದ್ದೇವೆ...."

"ಹಾಗಾದರೆ ಅವರು ನಿಮ್ಮನ್ನು ಮರೆತಿರಬೇಕು! ಅಂಥವರಿಗಾಗಿ ನೀನೇಕೆ...."

"ಇರಲಾರದು! ಒಂದು ವೇಳೆ ಅವರು ಮರೆತರೂ ನಾವು ಮರೆಯುವುದಿಲ್ಲ. ಇಲ್ಲಿ ನೋಡಿ!"

ಹುಡುಗಿಯು ತಟಕ್ಕನೆ ಕೊರಳಿನಲ್ಲಿದ್ದ ಸರವನ್ನು ಹೊರತೆಗೆದು, ಅದಕ್ಕೆ ತಗುಲಿಸಿದ್ದ ಪದಕದಹಾಗಿದ್ದುದನ್ನು ಒತ್ತಿ, ಅದರೊಳಗಿದ್ದ ಚಿಕ್ಕ

‘ಫೋಟೋ’ವನ್ನು ಮುಂದೆ ಹಿಡಿದು, ನೀರು ತುಂಬಿದ ಕಣ್ಣುಗಳಿಂದ ಸಾಹೇಬರು ಅದನ್ನು ನೋಡುತ್ತಿರುವಾಗಲೇ—ಮುಚ್ಚಳವನ್ನು ಮುಚ್ಚಿ, ಬಗ್ಗಿ ಅದನ್ನು ಸೆರಗಿನ ಒಳಗೆ ಹಾಕಿಕೊಳ್ಳುತ್ತಿದ್ದಳು.

ಮಿಂಚಿನ ವೇಗದಲ್ಲಿ ಅವರ ತೋಳು ಹುಡುಗಿಯ ನಡುವನ್ನು ಸುತ್ತಿತು. ಏನೆಂದು ತಿರುಗಿ ನೋಡುವಷ್ಟರಲ್ಲಿ ಹುಡುಗಿಯು ಅವರ ತೋಳುಗಳಲ್ಲಿ ಬಂದಿಯಾಗಿದ್ದಳು.

“ಮಗೂ,....ಮಗೂ, ಕೂಗಬೇಡ. ನಾನು....ನಾನೇ ನಿನ್ನ ತಂದೆ!”

ಹುಡುಗಿಯ ತರೆದ ಬಾಯಿ ಹಾಗೆ ನಿಂತಿತು. ಒಂದು ಕ್ಷಣ ಅವಳಿಗೆ ತಾನು ಎಲ್ಲಿರುವೆನೆಂಬುದರ ಅರಿವೇ ಇಲ್ಲವಾಯಿತು. ತಲೆ ಎತ್ತಿ ನೆಟ್ಟನೋಟದಿಂದ ಆ ಮುಖವನ್ನು ದಿಟ್ಟಿಸುತ್ತಿದ್ದಳು. ಆ ಕ್ಷಣದಲ್ಲಿ ಅವಳಿಗೆ ತಾವು ಅಷ್ಟು ವರ್ಷಗಳು ಅನುಭವಿಸಿದ ಅವಮಾನ, ಸಂಕಟ ಎಲ್ಲವೂ ಕಣ್ಣಿಗೆ ಕಟ್ಟಿದಂತಾಯಿತು. ಅರಳಿದ ಕಣ್ಣುಗಳಿಂದ ಹನಿಹನಿಯಾಗಿ ನೀರು ಉದುರಿತು. ಆದರೂ ಹುಡುಗಿ ಆ ಬಂಧನದಿಂದ ಬಿಡಿಸಿಕೊಳ್ಳಲು ಯತ್ನಿಸಲಿಲ್ಲ. ಮಾತಿಗೆ ಮೀರಿದ ಸಂತೋಷವು ಇತರ ಎಲ್ಲಾ ಭಾವಗಳನ್ನೂ ಮೀರಿ ತಲೆ ಎತ್ತುತ್ತಿತ್ತು. “ಇನ್ನು ಯಾರೆದುರಿಗೂ ತಲೆ ತಗ್ಗಿಸಬೇಕಾಗಿಲ್ಲ! ತಂದೆ ಎಲ್ಲೆಂದು ಕೇಳಿದರೆ ಲಜ್ಜೆಯಿಂದ ಕಂಪಿಸಬೇಕಾಗಿಲ್ಲ! ಎಂತಹ ಸುಖ!”

“ಮಗೂ,—ನನ್ನ ಮಾತನ್ನು ನಂಬುವಿಯಾ!” ಸಾಹೇಬರು ತಮ್ಮ ಹಿಡಿತವನ್ನು ಬಿಟ್ಟು ಹುಡುಗಿಯನ್ನು ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಕೇಳಿದರು.

“ನಂಬುತ್ತೇನೆ. ಅದು ನಿಜವಿರಬೇಕು. ಇಲ್ಲದಿದ್ದರೆ ನೀವು ಕರೆದಾಗ ನನಗೆ ಬರಬೇಕೆಂದು ಎನಿಸುತ್ತಿರಲಿಲ್ಲ. ಆದರೆ....ಅಪ್ಪಾ, ನೀವೇಕೆ ಹಾಗೆ ಮಾಡಿದಿರಿ? ನಿಮ್ಮ ನಡತೆಯಿಂದ ನಮಗೆ ಎಷ್ಟು ವ್ಯಥೆಯಾಗಿದೆ ಗೊತ್ತೆ? ಇಲ್ಲಿಯೇ ಹುಟ್ಟಿ ಬೆಳೆದ ನೀವು, ಕೆಲವು ವರ್ಷಗಳು ಅಲ್ಲಿದ್ದ ಮಾತ್ರಕ್ಕೇ ನಮ್ಮ ಸಮಾಜದಲ್ಲಿ ನಮ್ಮಂತಹ ಹೆಂಗಸರ ಬಾಳು ಎಷ್ಟು ಕಷ್ಟವೆಂಬುದನ್ನು ಅಲ್ಲಿನ ವೈಭವದ ಬೆಡಗಿನಲ್ಲಿ ಮರೆತಿರಾ? ಇಷ್ಟು ಕಾಲ ನೀವೇಕೆ ನಿಮ್ಮ ನೆಲೆಯನ್ನು ಸಹ ತಿಳಿಸಲಿಲ್ಲ?”

ಸಾಹೇಬರು ಹುಡುಗಿಯ ಮಾತು ಮುಗಿಯುವವರೆಗೂ ಅವಳನ್ನೇ

ನೋಡುತ್ತಿದ್ದು—ಬಳಿಕ ಮೇಜಿನ ಅರೆಯನ್ನು ಎಳೆದು ಎರಡು ಚಿಕ್ಕ ಫೋಟೋಗಳನ್ನು ತೆಗೆದು,—

"ನೋಡು ಮಗು, ಈ ಫೋಟೋವನ್ನು ನಿಮ್ಮ ತಾಯಿ ನಿನ್ನ ಮೊದಲನೇ ವರ್ಷದ ಹುಟ್ಟಿದ ಹಬ್ಬದ ದಿನ ಕಳಿಸಿದಳು. ಅದನ್ನು ನೋಡಿದ ಕೂಡಲೇ ನನಗೆ ಹಾರಿ ಬರಬೇಕೆನ್ನಿಸಿತು. ಆದರೆ ಮಾರನೇ ದಿನವೇ ಪರೀಕ್ಷೆ! ಪರೀಕ್ಷೆ ಮುಗಿದ ಕೂಡಲೇ—ಮನಸ್ಸು ಆ ಸ್ಥಿತಿಯಲ್ಲಿರುವಾಗಲೇ ಹಿಂದಿರುಗಿದ್ದರೆ ಚೆನ್ನಾಗಿತ್ತು. ಆದರೆ ವಿಧಿ ಅಲ್ಲಿಗೆ ಬಿಡಲಿಲ್ಲ. ಸ್ವದೇಶಕ್ಕೆ ಮರಳುವ ಮೊದಲು ಇನ್ನೂ ಕೆಲವು ಊರುಗಳನ್ನು ನೋಡಿಕೊಂಡು ಬರಬೇಕೆಂದು ಹೊರಟು ಅಲ್ಲಿಯಲ್ಲೇ ಹೊಸ ಬಂಧನಕ್ಕೆ ಸಿಕ್ಕಿಬಿದ್ದೆ. ಯೌವನದ ದುಡುಕು! ಮುಂದೆ ಪರಿಣಾಮ ಈ ರೀತಿ ಆಗಬಹುದೆಂದು ತೋರಲಿಲ್ಲ. ಒಮ್ಮೆ ಆ ಸುಳಿಗೆ ಸಿಕ್ಕಿಬಿಟ್ಟಮೇಲೆ ಬಿಡಿಸಿಕೊಳ್ಳುವುದು ಸುಲಭವಾಗಿರಲಿಲ್ಲ. ಅದಕ್ಕಾಗಿ ಇಲ್ಲಿಯ ವಿಚಾರವಾಗಿ ಸುಳ್ಳು ಹೇಳಬೇಕಾಯಿತು. ಅಂಥಾ ಸಮಯದಲ್ಲಿ ಇಲ್ಲಿನ ಕಾಗದಪತ್ರಗಳು ಬರುವುದು ಪ್ರಮಾದಕ್ಕೆ ಅವಕಾಶವಾಗುವುದೆಂದು ತಿಳಿದು, ನಾನಿದ್ದ ಸ್ಥಳವನ್ನು ಬದಲಾಯಿಸಿ ನಿಮ್ಮೆಲ್ಲರಿಂದ ದೂರವಾದೆ. ಅದಕ್ಕೆ ತಕ್ಕಹಾಗೆ ಅಲ್ಲಿಯೇ ಜೀವನೋಪಾಯವೂ ದೊರಕಿತು,....ನಾನು ಮಾಡಿದ್ದು ಅಪರಾಧವೆಂದು ತೋರುತ್ತಿದ್ದರೂ—ಸಂದರ್ಭವು ನನ್ನ ಕೈ ಮೀರಿತ್ತು....ಕೆಲವು ದಿನಗಳ ಹಿಂದೆ ನನ್ನ....ಆ ಪತ್ನಿ ತೀರಿಹೋದಳು. ಇನ್ನು ಅಲ್ಲಿರುವ ಪ್ರಮೇಯವೇನೂ ಇರಲಿಲ್ಲ. ಇಲ್ಲಿಗೆ ಬರಲು ಸಿಕ್ಕಿದ ಮೊದಲನೇ ಅವಕಾಶವನ್ನು ಉಪಯೋಗಿಸಿಕೊಂಡು ಬಂದುಬಿಟ್ಟೆ. ಬಂದ ಕೂಡಲೇ ಊರಿಗೆ ಹೋಗಿ ವಿಚಾರಿಸಿದೆ. ನಿಮ್ಮ ತಾಯಿ ಊರುಬಿಟ್ಟು ಬಹಳ ವರ್ಷಗಳಾಯಿತೆಂದೂ, ಈಗ ಎಲ್ಲಿರುವರೋ ತಿಳಿಯದೆಂದೂ ಹೇಳಿದರು...."

"ಹೌದು ಅಜ್ಜ ಹೋದಮೇಲೆ ನಮಗೆ ಅಲ್ಲಿರುವುದು ಬಹಳ ಕಷ್ಟವಾಯಿತು. ನೆಂಟರಿಷ್ಟರ ನಡುವೆ ಅಪಹಾಸ್ಯಕ್ಕೆ ಗುರಿಯಾಗಿ ಇರುವುದಕ್ಕಿಂತಲೂ, ಕಾಣದ, ಕೇಳದ ಊರಲ್ಲಿರುವುದೇ ಲೇಸೆಂದು ಇಲ್ಲಿಗೆ ಬಂದುಬಿಟ್ಟೆವು. ಅದಲ್ಲದೆ ಅಲ್ಲಿ ನನಗೆ ಓದುವುದಕ್ಕೂ ಅವಕಾಶವಿರಲಿಲ್ಲ."

"ಇಲ್ಲಿಗೆ ಬಂದ ಮೇಲೂ ನಿಮ್ಮ ಸುದ್ದಿ ತಿಳಿಯದೆ ಬಹಳ ಚಿಂತೆ

ಯಾಗಿತ್ತು. ನಿನ್ನೆ ಸಮಾರಂಭದಲ್ಲಿ ನಿನ್ನನ್ನು ನೋಡಿದ ಕೂಡಲೇ ನನಗೆ ಹೇಗೋ ಆಯಿತು. ನಾನು ವಿಲಾಯತಿಗೆ ಹೊರಟಾಗ ನಿಮ್ಮ ತಾಯಿ ಹಾಗೇ ಇದ್ದಳು. ಸಮಾರಂಭವು ಮುಗಿಯುವವರೆಗೆ ಹೇಗೋ ಸುಮ್ಮನಿದ್ದೆ. ಬಿಡುವು ದೊರೆತ ಕೂಡಲೇ ನನ್ನ ಕಡೆಯವರಿಂದ ವಿಚಾರಿಸಿದೆ. ನನಗೆ ಬೇಕಾದ ವಿಷಯ ತಿಳಿಯಿತು. ರಾತ್ರೆ ಕಣ್ಣು ಮುಚ್ಚಲಿಲ್ಲ. ನಿಮ್ಮನ್ನು ಯಾವ ರೀತಿ ನೋಡಲೆಂದು ಯೋಚಿಸುತ್ತಿದ್ದೆ....ಯೌವನದಲ್ಲಿ ನಾವು ಕೆಲವು ವಿಚಾರಗಳಿಗೆ ಅಷ್ಟಾಗಿ ಗಮನಕೊಡುವುದಿಲ್ಲ. ಮುಂದೆ ಕಾಲವು ಕಳೆದಂತೆಲ್ಲಾ ಅವರ ಬೆಲೆ ತಿಳಿಯುತ್ತಾ ಬರುತ್ತದೆ. ನಿನ್ನೆ ಅದರ ಅನುಭವ ನನಗೆ ಚೆನ್ನಾಗಿಯೂ ಆಯಿತು....ಸಾಧ್ಯವಾದರೆ ನಿಮಗೆ ನನ್ನಿಂದಾದ ಅನ್ಯಾಯಕ್ಕೆ ಪರಿಹಾರ ಮಾಡಲು ಪ್ರಯತ್ನಿಸುತ್ತೇನೆ..."

ಹುಡುಗಿ ಸುಮ್ಮನೆ ಕೇಳುತ್ತಿದ್ದಳು. ಆ ಸಮಯದಲ್ಲಿ ಆಡಲು ಹೋಗಿದ್ದ ಹುಡುಗ ಒಳಗೆ ಬಂದನು. ಸಾಹೇಬರು ಅವನನ್ನು ಹತ್ತಿರ ಕರೆದು,—"ಮಗೂ, ನಿನ್ನ ಅಕ್ಕನಿಗೆ ವಂದಿಸು. ಕುಮಾರಿ, ನಿನ್ನ ತಮ್ಮ!" ಎಂದು ಪರಿಚಯ ಮಾಡಿಕೊಟ್ಟರು.

ಹುಡುಗನು ಇಷ್ಟವಿಲ್ಲದಿದ್ದರೂ ತಂದೆಯ ಮಾತಿಗಾಗಿ ಅವಳ ಬಳಿ ಬಂದು ನಮ್ರತೆಯಿಂದ ವಂದಿಸಿದನು. ಹುಡುಗಿಯೂ ತಂದೆಯು ತನ್ನನ್ನೇ ನೋಡುತ್ತಿರುವುದನ್ನು ತಿಳಿದು—ಹುಡುಗನನ್ನು ಆದರಿಸಿ ಹತ್ತಿರ ಕುಳ್ಳಿರಿಸಿಕೊಂಡು,—"ನಾನಿನ್ನು ಹೊರಡುತ್ತೇನೆ. ಬಹಳ ಹೊತ್ತಾಯಿತು! ಅಮ್ಮ ನನಗಾಗಿ ಎಷ್ಟು ಕಳವಳಪಟ್ಟಿರುತ್ತಾರೋ!" ಎಂದು ಹೇಳಿ ಎದ್ದಳು.

"ಮಗೂ, ನಾನು ನಿನ್ನ ಸಂಗಡ ಬರುತ್ತೇನೆ. ನಿನ್ನ ತಾಯಿಯ ಭೇಟಿ ಮಾಡಿಸುವೆಯಾ....!"

"ಆಗಬಹುದು."

ಇಬ್ಬರೂ ಹೊರಟರು. ಸಾಹೇಬರು ಮತ್ತೇನೋ ಯೋಚಿಸಿದವರಾಗಿ, ಮಗನನ್ನೂ ಜೊತೆಗೆ ಕರೆದುಕೊಂಡರು.

ಮನೆಯು ಹತ್ತಿರವಾದಂತೆ ಹುಡುಗಿಯ ಉತ್ಸಾಹವು ಹೆಚ್ಚಾಯಿತು. ತಾನು ನೆಲದ ಮೇಲೆ ನಡೆಯದೆ ಗಾಳಿಯಲ್ಲಿ ತೂರಿಹೋಗುತ್ತಿರುವಂತೆ

ತೋರಿತು. ಅವಳಿಗಾಗಿ ತಾಯಿಯು ದಾರಿಯಲ್ಲಿ ಕಾಯುತ್ತಿರಲಿಲ್ಲ. ಬಾಗಿಲ ಬಳಿಯೂ ಇಲ್ಲ! ಮತ್ತೆಲ್ಲಿ? ವರ್ಷಾಂತರಗಳಿಂದ ಈ ಸುದಿನಕ್ಕಾಗಿ ಕಾಯು ತ್ತಿದ್ದವಳಿಗೆ ಆ ಸಮಾಚಾರವನ್ನು ತಿಳಿಸುವುದು ಎಷ್ಟು ಸುಖ!

ಹುಡುಗಿಯು ಅವರನ್ನು ಬಾಗಿಲ ಬಳಿ ಬಿಟ್ಟು ಒಳಗೆ ಹೋದಳು. ಮನೆಯಲ್ಲಿ ಸಣ್ಣದಾಗಿ ದೀಪ ಉರಿಯುತ್ತಿತ್ತು. ಅದರ ಬೆಳಕಿನಲ್ಲಿ ತಾಯಿಯು ಗೋಡೆಯನ್ನೊರಗಿಕೊಂಡು ನಿಂತಿರುವುದು ಕಾಣಿಸಿತು. ಹುಡುಗಿಯು ಹಿಂದಿ ನಿಂದ ಹೋಗಿ ತಾಯಿಯನ್ನು ತಬ್ಬಿಕೊಂಡು,—"ಅಮ್ಮ ನಿನಗೊಂದು ಸುಖದ ಸುದ್ದಿಯನ್ನು ತಂದಿದೇನೆ! ಅದೇನು ಹೇಳಮ್ಮ ನೋಡೋಣ!" ಎಂದಳು.

ತಾಯಿ ನಿದಾನವಾಗಿ ಆ ಕಡೆ ತಿರುಗಿ ಮಗಳ ಮುಖವನ್ನು ನೋಡಿ ದಳು. ಹುಡುಗಿ ಗಾಬರಿಯಾಗಿ,—"ಯಾಕಮ್ಮ ಅಳುತ್ತೀಯೆ? ನಾನು ಹೇಳುವುದನ್ನು ಕೇಳುವುದಿಲ್ಲವೇ?" ಎಂದಳು.

ಹುಡುಗಿಯು ಸುದ್ದಿಯನ್ನು ಹೇಳಬೇಕಾಗಿರಲಿಲ್ಲ. ಸಂಜೆಯಿಂದಲೂ ಮಗಳ ದಾರಿ ಕಾಯುತ್ತ ನದಿಯ ಬಳಿ ನಿಂತಿದ್ದ ತಾಯಿ—ದೂರದಿಂದಲೇ ಮಗಳು ಮತ್ತೊಬ್ಬರ ಕೈ ಹಿಡಿದುಕೊಂಡು ಬರುತ್ತಿರುವುದನ್ನು ನೋಡಿದಳು. ಕೇಳುವುದಕ್ಕೂ ಹತ್ತಿರ ನೋಡುವುದಕ್ಕೂ ಮೊದಲೇ ಅವಳ ಹೃದಯ ಅವಳಿಗೆ ಎಲ್ಲವನ್ನೂ ಹೇಳಿತ್ತು. ಅವಳು ಅಲ್ಲಿ ನಿಲ್ಲಲಾಗದೆ ಓಡಿ ಹೋಗಿ, ಮನೆಯನ್ನು ಸೇರಿದ್ದಳು.

ಹುಡುಗಿಯು ಮೆಲ್ಲಗೆ ತಾಯಿಯ ಭುಜವನ್ನು ಸವರುತ್ತ, "ಅಮ್ಮ ಏನಾಯಿತು ಹೇಳಬಾರದೇ?" ಎಂದಳು

"ಏನೂ ಇಲ್ಲಮ್ಮ. ಎಲ್ಲಾ ಒಳ್ಳೆಯದೆ! ನನ್ನ ಅದೃಷ್ಟದಲ್ಲಿ ಒಳ್ಳೆಯದು ನೋಡುವುದು ಬರೆದಿಲ್ಲ. ಅಷ್ಟೆ! ಈ ಸಂಬಂಧಕ್ಕಾಗಿ ಎರಡು ವರ್ಷದಿಂದ ಕಷ್ಟಪಟ್ಟೆ. ಅವರು ಒಪ್ಪಿ ಎಲ್ಲವೂ ಅಣಿಯಾಗಿತ್ತು....ನೀನು ಸುಖವಾಗಿರು ವುದನ್ನು ನೋಡಿ ಕಣ್ಣುಮುಚ್ಚಬೇಕೆಂದಿದ್ದೆ. ದೇವರಿಗೆ ಅದೂ ಮನಸ್ಸಿಗೆ ಬರಲಿಲ್ಲ."

"ಈಗ ಅಡ್ಡಿಯೇನು ಬಂತು? ಆಗಲೇ ಮದುವೆಯಾಗಲು ಒಪ್ಪಿದವರು, ಈಗ ತಂದೆ ಬಂದಿರುವುದು ತಿಳಿದರೆ ಇನ್ನೂ ಸಂತೋಷ ಪಟ್ಟಾರು."

"ಅಷ್ಟೇ ಮತ್ತೆ! ನಿನ್ನ ಮುದ್ದಿನ ತಮ್ಮನನ್ನು ಕರೆದುಕೊಂಡು ಹೋಗಿ ತೋರಿಸು. ಸಂತೋಷ ಇನ್ನೂ ಹೆಚ್ಚಾಗಬಹುದು!"

"ಅಮ್ಮಾ, ನಿದ್ರೆಯಲ್ಲಿಯೂ, ಎಚ್ಚರದಲ್ಲಿಯೂ ಅವರಿಗಾಗಿ ಹಂಬಲಿಸಿದೆ! ಈಗ ಅವರು ಎದುರಿಗೆ ಬಂದಾಗ ಈ ನಿಷ್ಠುರದ ಮಾತೇಕಮ್ಮ? ಅವರ ತಪ್ಪು ಅವರಿಗೆ ತಿಳಿದಿದೆ. ಅದಕ್ಕಾಗಿ ಪಶ್ಚಾತ್ತಾಪ ಪಡುತ್ತ, ಹಿಂದಿನ ಕೊರತೆಯನ್ನು ತುಂಬಲು ಅವರು ಸಿದ್ಧವಾಗಿದಾರೆ. ಸುಖವು ಕೈಗೆ ಎಟಕುವಂತಿರುವಾಗ ಅದನ್ನು ಬಿಸಾಡುವುದು ಸರಿಯೆ?"

ತಾಯಿಯು ನಕ್ಕಳು. ಹುಚ್ಚುಹುಡುಗಿ! ಹಿಂದಿನ ಕೊರತೆಯನ್ನು ತುಂಬುವುದು! ಇನ್ನು ಏನು ಮಾಡಿದರೆ ತಾನೇ ಆ ಕೊರತೆ ತುಂಬೀತು? ಪಾಪ! ಹುಡುಗಿ ಅದನ್ನು ಹೇಗೆ ತಿಳಿಯಬಲ್ಲಳು?

"ಸುಖವು ಯಾರಿಗೆ ಬೇಡ ಮಗೂ? ಆದರೆ ಅದು ನನ್ನ ಹಣೆಯಲ್ಲಿ ಬರೆದಿಲ್ಲ. ಯಾವದೊಂದು ದೂರದ ಆಸೆಯಿಂದ ಕಷ್ಟವನ್ನು ಎಣಿಸದೆ ದಿನವನ್ನು ತಳ್ಳುತ್ತಿದ್ದೆನೋ ಅದೂ ನನ್ನ ಭಾಗಕ್ಕೆ ಮಸಕಾಯಿತು! ನನಗೆ ಜೀವನದಲ್ಲಿ ಇನ್ನು ಏನೂ ಉಳಿದಿಲ್ಲ ಮಗು!"

"ಇಷ್ಟು ದಿವಸಕ್ಕೆ ಮನೆಗೆ ಬಂದ ತಂದೆಗೆ ಇದೇ ಏನಮ್ಮ ನೀನು ಕೊಡುವ ಸ್ವಾಗತ?"

ತಾಯಿಯ ಕಣ್ಣಿನಿಂದ ಪುನಃ ನೀರು ಉರುಳಿತು. ಅವಳು ಮಾತಾಡುತ್ತ ಅಲ್ಲಿ ಹಾಕಿದ್ದ ದೊಡ್ಡ ಪಟದ ಎದುರಿಗೆ ಬಂದು ನಿಂತಳು. ಆಗ ತಾನೆ ಹಚ್ಚಿದ್ದ ಊದುಕಡ್ಡಿಯಿಂದ ಹೊಗೆಯು ಸುರಳಿಸುರಳಿಯಾಗಿ ಮೇಲಕೆ ಹೋಗುತ್ತಿತ್ತು. ತಾಯಿಯು ಕಣ್ಣೊರಸಿಕೊಂಡು ಪುನಃ ಪಟವನ್ನು ನೋಡಿದಳು. ಆ ವೇಳೆಗೆ ಸರಿಯಾಗಿ ಅವರು ತಟಕ್ಕನೆ ಬಂದು ಎದುರಿಗೆ ನಿಂತುಕೊಂಡು,—

"ಜಯ" ಎಂದು ಕರೆದರು.

ಜಯ ಒಂದು ಸಲ ಪಟದ ಕಡೆಗೂ, ಒಂದು ಸಲ ಎದುರಿಗೆ ನಿಂತಿದ್ದ ಗಂಡನ ಕಡೆಗೂ, ನೋಡಿದಳು. ಆ ಚಿತ್ರ ಅವರು ಹೋಗುವುದಕ್ಕೆ ಮೊದಲು ತೆಗೆದದ್ದು. ಜಯ ಅದನ್ನು ದೊಡ್ಡದು ಮಾಡಿಸಿದ್ದಳು. ಈಗ ನೋಡಿದರೆ ಎಷ್ಟು ವ್ಯತ್ಯಾಸ! ತಟಕ್ಕನೆ ಗುರುತು ಕೂಡ ಹತ್ತುವಂತಿಲ್ಲ! ಅಷ್ಟು ದೀರ್ಘ

ಕಾಲ ಕಳೆದ ಮೇಲೆ ಇಂದು ಇಬ್ಬರೂ ಆ ಚಿತ್ರದೆದುರಿಗೆ ನಿಂತಿದ್ದಾರೆ! ಯಾವ ಚಿತ್ರದಲ್ಲಿ ದೇವತ್ವವನ್ನಾರೋಪಿಸಿ ಅನನ್ಯಭಾವದಿಂದ ಪೂಜಿಸಿ,—ಪವಿತ್ರ ಪ್ರೇಮದಿಂದ ಆರಾಧಿಸಿದಳೋ, ಅದು ಕೇವಲ ತನ್ನ ಭ್ರಮೆಯೆಂದು ತೋರಿತು. ಅವಳ ಆದರ್ಶವು ಧೂಪದೊಡನೆ ಗಾಳಿಯಲ್ಲಿ ತೂರಿ ಹೋಗುತ್ತಿರುವಂತೆ ಭಾಸವಾಯಿತು. ವರ್ಷಗಳ ಆಸೆ, ನಿರೀಕ್ಷೆ ಎಲ್ಲವೂ ಅದರೊಡನೆ ತೇಲಿ ಹೋಗುತ್ತಿರುವಂತೆ ತೋರಿತು.

"ಜಯ,—ನಾನು ಬಂದು ನಿನ್ನ ವ್ಯಥೆಯನ್ನು ಹೆಚ್ಚು ಮಾಡಿದಂತಾಯಿತು. ಮನ್ನಿಸು—ನನಗೆ ಗೊತ್ತಾಗಲಿಲ್ಲ."

ಜಯ ಸುಮ್ಮನಿದ್ದಳು. ತಾನು ಆಗ ಅನುಭವಿಸುತ್ತಿರುವುದು ಸುಖವೋ, ದುಃಖವೋ—ಅಥವಾ ಅವೆರಡನ್ನೂ ಮೀರಿದ ಮತ್ತಾವುದೋ? ಅವಳಿಗೇ ತಿಳಿಯದಿರುವಾಗ ಮತ್ತೊಬ್ಬರಿಗೆ ಹೇಳುವುದೆಂತು? ಬಹಳ ದಿವಸಗಳಿಂದ ಅವಲಂಬಿಸಿಕೊಂಡಿದ್ದ ಕಂಬವು ಇದ್ದಲ್ಲಿಯೇ ಕರಗಲು ಮೊದಲಾದರೆ—ಅದನ್ನು ಬಲವಾಗಿ ಅಪ್ಪಿಕೊಂಡಿದ್ದವರ ಸ್ಥಿತಿ ಹೇಗಿರುತ್ತೆ? ಜಯ ಅಸಹಾಯಳಂತೆ ತನ್ನ ಆರಾಧ್ಯಮೂರ್ತಿಯು ಮೆಲ್ಲಮೆಲ್ಲಗೆ ಚಿತ್ರದಿಂದ ಜಾರುತ್ತ, ಮರೆಯಾಗುತ್ತಿರುವುದನ್ನು ನೋಡುತ್ತ ವಿಹ್ವಲಳಾಗಿ ನಿಂತಿದ್ದಳು. ಹೃದಯವು ಬೇಡವೆನ್ನುತ್ತಿದ್ದರೂ, ಮನಸ್ಸು "ಇವನನ್ನೇ ಏನು ನೀನು ದೇವರೆಂದು ಪೂಜಿಸಿದ್ದು?" ಎಂದು ಕೇಳುತ್ತಿತ್ತು.

"ಜಯ, ನೀನು ಬಹಳ ನೊಂದಿದ್ದೀ; ನನಗೆ ತಿಳಿಯುತ್ತದೆ. ಆದರೆ ಹಿಂದೆ ಕಷ್ಟಪಟ್ಟೆಯೆಂದು ಮುಂದೆಯೂ ಹಾಗೇ ಇರಬೇಕೆಂಬ ನಿಯಮವೇನೂ ಇಲ್ಲ. ತಪ್ಪು ಮಾಡುವುದು ಮಾನವನ ಸ್ವಭಾವ—ಆದರೆ ತಪ್ಪನ್ನೊಪ್ಪಿಕೊಂಡು ಪಶ್ಚಾತ್ತಾಪದಿಂದ ಬಿದಿಯುತ್ತಿರುವಾಗ ಕ್ಷಮಿಸುವುದು ನಿನ್ನಂತಹ ದೇವತೆಯ ಧರ್ಮ! ದ್ರೋಹ ಮಾಡಿದೆ—ನಿಜ; ಆದರೆ ಅದರಿಂದ ನಾನು ಸುಖಿಯಾಗಲಿಲ್ಲ. ನಾನಾಗಿಯೇ ಹಾಕಿಕೊಂಡ ಸಂಕೋಲೆಯಲ್ಲಿ ಸಿಕ್ಕಿಕೊಂಡು, ಬಿಡಿಸಿಕೊಳ್ಳಲು ಯತ್ನವಿಲ್ಲದೆ ಇದ್ದೆ. ಜೀವನದ ಹೆಚ್ಚು ಭಾಗ ದುಃಖದಲ್ಲಿ ಕಳೆಯಿತು. ಆದರೆ ಎಲ್ಲವೂ ಮುಗಿದಿಲ್ಲ! ನೀನು ಮನಸ್ಸು ಮಾಡಿದರೆ ಈಗಲೂ ಸುಖವಾಗಿರಬಹುದು. ಅಶಾಶ್ವತವಾದ ಬದುಕಿನಲ್ಲಿ ಇರಬೇಕಾಗಿದ್ದ ರೀತಿ

ಯನ್ನು ನೆನೆದೂ ಹಲುಬುವುದಕ್ಕಿಂತ, ಇದ್ದುದರಲ್ಲಿ ಸಂತೋಷವಾಗಿರುವುದು ಮೇಲಲ್ಲವೇ?"

"ತಾವು ಹೋದಾಗಿನಿಂದ ಮನೆಯಲ್ಲಿ ಈ ಚಿತ್ರದ ಹೊರತು ಬೇರೆ ದೇವರನ್ನಿಟ್ಟು ಪೂಜಿಸಿಲ್ಲ. ತಮ್ಮ ಮಗು,—ಅದನ್ನು ನನ್ನ ಶಕ್ತಿ ಮೀರಿ ಬೆಳಸಿ ವಿದ್ಯಾಬುದ್ಧಿಗಳನ್ನು ಕಲಿಸಿದೇನೆ. ಆದರೆ ತಂದೆಯನ್ನು ನೋಡದ ಕೊರತೆ ಅವಳನ್ನು ಬಹಳ ಬಾಧಿಸುತ್ತಿತ್ತು. ಆ ಆಶೆಯನ್ನು ಪೂರೈಸಲು ನಾನು ಅಸಮರ್ಥಳಾಗಿದ್ದೆ. ಇಷ್ಟು ಕಾಲದ ಮೇಲೆ ನನ್ನ ಪ್ರಾರ್ಥನೆ ಫಲಿಸಿತು. ದೇವರ ದಯದಿಂದ ತಾವು ಸುಖವಾಗಿ ಬಂದುದನ್ನು ನೋಡಿಯಾಯಿತು. ಇನ್ನು ನನಗೆ ಯಾವ ಆಶೆಯೂ ಇಲ್ಲ."

"ಸ್ವಲ್ಪ, ಯೋಚನೆ ಮಾಡು—ಜಯ! ಅಭಿಮಾನಕ್ಕೆ ಒಳಗಾಗಿ ಸುಖದ ದಾರಿಯನ್ನು ಮುಚ್ಚಬೇಡ."

"ನನಗೆ ಯಾವ ದಾರಿಯೂ ಇಲ್ಲ. ಯಾವ ಬಗೆಯ ಹೊಸ ಜೀವನಕ್ಕೂ ಒಗ್ಗದಷ್ಟು ಹಳೆಯ ಜೀವನಕ್ಕೆ ಅಂಟಿಹೋಗಿದೆ ಮನಸ್ಸು! ಬೆಳಕಿನ ಕಿರಣವನ್ನೂ ಸಹ ನೋಡಲಾರದಷ್ಟು ಅಂಧಕಾರ ಒಳಗೆ ತುಂಬಿದೆ. ಕಷ್ಟವೇ ಬದುಕಿನ ಜೀವಾಳವಾಗಿಹೋಗಿದೆ. ಹೊಸ ಬಾಳನ್ನು ಆರಂಭಿಸಲು ಸಾಧ್ಯವಿಲ್ಲ....ಇದೇ ಮೊದಲನೆಯದಾಗಿ...ಕೊನೆಯದೂ ಆಗಿ ತಮ್ಮಲ್ಲಿ ಬೇಡಿಕೊಳ್ಳುತ್ತೇನೆ,—ನನ್ನ ಸ್ವತಂತ್ರಕ್ಕೆ ಅಡ್ಡಿ ಬರಬಾರದು. ನನಗೆ ಹೀಗಿರುವುದೇ ಸುಖ!"

ಜಯ ಸುಮ್ಮನಾದಳು. ಸಾಹೇಬರು ಅವಳನ್ನೇ ದಿಟ್ಟಿಸುತ್ತ ಮೌನವಾಗಿದ್ದರು. ಹುಡುಗರು ಏನು ಹೇಳಲೂ ತೋರದೆ ಒಬ್ಬರನ್ನೊಬ್ಬರು ನೋಡುತ್ತಿದ್ದರು. ಇವೆಲ್ಲವನ್ನೂ ನೋಡುತ್ತ—ಮಾನವನ ಮರುಳುತನಕ್ಕಾಗಿ ಮೃದುಹಾಸ ಮಾಡುತ್ತ ಒಂದನ್ನೊಂದು ಅಪ್ಪಿ ಮುಂದೆ ಸಾಗುತ್ತಿತ್ತು ನದಿ!!

---

# ತಾಯಿ

ಕೊಠಡಿಯಲ್ಲೊಂದು ಹಸುರು ದೀಪ. ಅದರ ಮಂದವಾದ ಬೆಳಕಿನಲ್ಲಿ ದೀಕ್ಷಿತರು ಕುರ್ಚಿಯಮೇಲೆ ಕೈಯೂರಿ ಕುಳಿತಿದ್ದರು. ಎದುರಿಗೆ ಮಂಚ. ಸೊಳ್ಳೆಯ ಪರದೆಯ ಒಳಗಿನಿಂದ ಮೆಲ್ಲಗೆ ಉಸಿರಾಡುವ ಸದ್ದು. ದೀಕ್ಷಿತರ ನೋಟವು ಮಂಚದ ಕಡೆಗಿದ್ದಿತು. ಅವರಿಗೆ ಅದೊಂದೇ ಯೋಚನೆ; ‘ ಇಷ್ಟು ಸುಖದ ಸಾಮಗ್ರಿಗಳ ನಡುವೆ ಇದ್ದರೂ ಈ ಮನುಷ್ಯನಿಗೆ ಸುಖವಿಲ್ಲವಲ್ಲ— ಇದು ಯಾವ ನ್ಯಾಯ ! ಇವನೊಬ್ಬನೇ ಅಲ್ಲ—ಈ ಮನೆಯಲ್ಲಿ ಯಾರಿಗೂ ಸುಖವಿರುವಂತಿಲ್ಲ. ಇದಕ್ಕೆ ಏನಾದರೂ ಮಾಡಲೇಬೇಕು. ಸೀತಮ್ಮ ವರ್ಷಗಟ್ಟಲೆ ತಪಸ್ಸು ಮಾಡಿದ್ದು ಈ ಸುಖಕ್ಕೇ ? ಅವಳು ನಿಟ್ಟುಸಿರಿಡುವುದನ್ನು ನೋಡಿ ಸೈರಿಸುವುದಕ್ಕಾಗುವುದಿಲ್ಲ. ನಾನು ನೋಡಿಯೂ ಸುಮ್ಮನಿದ್ದರೆ— ಸ್ವರ್ಗದಲ್ಲಿರುವ ನನ್ನ ಸ್ನೇಹಿತ ಏನೆಂದುಕೊಂಡಾನು ! ಪಾಪ— ಆ ಹುಡುಗಿ, ಅವಳು ತಾನೇ ಏನು ಮಾಡಿಯಾಳು ? ಎಲ್ಲರೂ ಒಳ್ಳೆಯವರೇ ! ಆದರೇನು ಸಾಮರಸ್ಯವಿಲ್ಲ. ಏನಾದರೂ ಆದರೆ—ಆ ಹುಡುಗಿ....ಅವಳಿಂದಲೇ ಆಗಬೇಕು. ಅವಳಿಗೆ ಸರಿಯಾಗಿ ತಿಳಿಸಬೇಕು ... ...ಬುದ್ಧಿವಂತೆ....’ ದೀಕ್ಷಿತರ ಮನಸ್ಸು ಇನ್ನೂ ಏನೇನೋ ಗುಣಿಸಿ ಭಾಗಿಸಿ ಒಂದು ಸಿದ್ಧಾಂತಕ್ಕೆ ಬಂದಿತ್ತು. ದಾರಿ ಕಾಣದವರಿಗೆ ಹೊಸ ದಾರಿಯ ಕುರುಹು ಕಂಡಾಗ ಉಂಟಾಗುವ ಸಮಾಧಾನದ ಸುಳಿಯು ಅವರ ಮುಖದ ಮೇಲೆ ಕಾಣಿಸಿತು. ಹಿಂದೆ ಸದ್ದಾಗಲು ತಿರುಗಿ ನೋಡಿ—“ ನಮಸ್ಕಾರ, ದಯಮಾಡಿಸಬೇಕು ಡಾಕ್ಟರು’’ ಎಂದರು.

“ ನಮಸ್ಕಾರ ಯಜಮಾನರಿಗೆ. ಅನಂತರಾಮಯ್ಯ ಇನ್ನೂ ಎದ್ದಿಲ್ಲವೋ ? ’’

“ ಇನ್ನೂ ಇಲ್ಲ. ಎಬ್ಬಿಸಲೋ ಬೇಡವೋ ಎಂದು ಅನುಮಾನಿಸುತ್ತಿದ್ದೆ. ಆ ವೇಳೆಗೆ ತಾವೇ ಬರೋಣವಾಯಿತು. ’’

“ ಸ್ವಲ್ಪ ಹೊತ್ತು ನೋಡೋಣ; ಅವನೇ ಏಳಬಹುದು. ’’

"ಡಾಕ್ಟರೇ, ನೀವೇ ನಮ್ಮ ಭಾಗದ ದೇವರು. ನಾನೂ ಹದಿನೈದು ದಿನಗಳಿಂದ ನೋಡುತ್ತಿದೇನೆ. ನೀವು ಅನಂತು ವಿಚಾರದಲ್ಲಿ ಅಷ್ಟು ಎಚ್ಚರಿಕೆ ತೆಗೆದುಕೊಳ್ಳದಿದ್ದರೆ ಏನಾಗುತ್ತಿತ್ತೋ? ಯಾವ ಜನ್ಮದ ಬಂಧುವೋ? ನಾವು ಏನು ಮಾಡಿದರೆ ತಾನೇ........"

"ಬೇಡಿ ಯಜಮಾನರೇ—ಅಷ್ಟು ದೊಡ್ಡ ಮಾತು ಬೇಡ. ಎಲ್ಲ ದೇವರ ದಯ. ನಾವೆಷ್ಟರವರು? ನಿಮಿತ್ತ ಮಾತ್ರ. ಇದರಲ್ಲಿ ಮನುಷ್ಯಯತ್ನವೇನಾದರೂ ಇದ್ದರೆ ಅದು ಆ ಮಹಾತಾಯಿಗೆ ಸೇರಿದ್ದು. ಅವಳೆದುರಿಗೆ ಹೇಳಿದರೆ ಸಂಕೋಚಪಟ್ಟುಕೊಳ್ಳುತ್ತಾಳೆಂದು ಸುಮ್ಮನಿದ್ದೆ. ನಾನೂ ಎಷ್ಟೋ ಕಡೆ ನೋಡಿದೇನೆ. ಆದರೆ ಹೀಗೆ....ಪ್ರಾಣಿ, ಹಗಲು-ರಾತ್ರೆ, ದಿನ-ವಾರ, ಒಂದೂ ಕಾಣಳು. ಅವನ ಹಾಸಿಗೆಯಾಯಿತು, ಅವಳಾಯಿತು. ಕೊನೆಗೆ ಆ ಮಗು....ಅದೂ ಕೂಡ ಮರೆತು ಹೋಗಿತ್ತೇನೋ—ಸದಾ ಆಳಿನ ಹತ್ತಿರ. ಅವನು ದಯವಿಟ್ಟು ಹಾಲು ಕುಡಿಸಿದರುಂಟು. ಇಲ್ಲದಿದ್ದರೆ ಇಲ್ಲ! ಆ ಕಷ್ಟ ನೋಡಲಾರದೆ ನಾನು ಕರೆದುಕೊಂಡು ಹೋದೆ. ಅನಂತರಾಮಯ್ಯನಿಗೆ ಜ್ವರ ನಿಂತಮೇಲೆ—"ಮಗುವೆಲ್ಲಿ" ಎಂದು ವಿಚಾರಿಸಿದಳಂತೆ. ಮಧ್ಯೆ ಎರಡು ದಿನವಂತೂ ನನಗೇ ಧೈರ್ಯವಿರಲಿಲ್ಲ. ಮುದುಕಮ್ಮ ಒಬ್ಬರು ಒಳಗೆ; ಹೊರಗಡೆ ಈ ಹುಡುಗಿ ಒಬ್ಬಳು. ನಾನೇ ನಿಮ್ಮ ಕಡೆ ಯಾರಾದರೂ ದೊಡ್ಡವರಿದ್ದರೆ ತಿಳಿಸಿ ಎಂದು ಹೇಳಿದೆ. ಆ ವೇಳೆಗೆ ತಾವೇ ಹೇಳಿ ಕಳುಹಿಸಿದಂತೆ ಬಂದಿರಿ ಎನ್ನಿ; ಅನಂತರಾಮಯ್ಯ....ತಮಗೆ ಅಣ್ಣನ ಮಗನೋ?"

"ಅಲ್ಲ. ಅವನ ತಂದೆಯೂ ನಾನೂ ಸ್ನೇಹಿತರು. ಸ್ನೇಹ ಎಂದರೆ ಬೆತ್ತಲೆಯಾಗಿದ್ದಾಗಿನಿಂದಲೂ ಒಟ್ಟಿಗೆ ಆಡಿದವರು. ಅಣ್ಣತಮ್ಮಂದಿರಿಗಿಂತ ಹೆಚ್ಚು. ಒಂದೇ ಮನೆಯವರಂತೆ ಇದ್ದೆವು. ಈಗಲೂ ಅವರ ಮನೆಯವರೆಲ್ಲ ನನ್ನ 'ಚಿಕ್ಕಯ್ಯ' ಎಂದೇ ಕರೀತಾರೆ...."

"ಶಾರದ, ಡಾಕ್ಟರು ಹೇಳಿದ ಮಾತು ನಿಜ. ನಿನ್ನಿಂದಲೇ ನಾನು.... ಉಳಿದದ್ದು. ರಾತ್ರಿ ಎಷ್ಟು ಮನೋಹರವಾಗಿದೆ. ಈಗ ಅದರ ಬೆಲೆ ತಿಳಿಯುತ್ತಿದೆ....ಇಲ್ಲ, ನಿನ್ನನ್ನು ತೊಂದರೆ....ಇಲ್ಲ. ನಿದ್ರೆ ಮಾಡು. ಎಷ್ಟು ದಿನವಾಯಿತೋ....ಕಣ್ಮುಚ್ಚಿ! ಸುಂದರ, ಎಲ್ಲಾ ಸುಂದರ....ಈ ರಾತ್ರಿ....ಆಕಾಶ.... ಚಂದ್ರ....ನಕ್ಷತ್ರ....ನಾನು....ನೀನೂ...."

“ ಶಾರದಮ್ಮ, ನೋಡು ಬಾ. ಯಜಮಾನರು ಕನಸಿನಲ್ಲೂ ನಿನ್ನನ್ನೇ ಕಾಣುತ್ತ ಕನವರಿಸುತ್ತಿದಾರೆ. ”

“ ಅನಂತೂ....ಅನಂತು....ಏಳಪ್ಪ. ಡಾಕ್ಟರು ಬಂದಿದಾರೆ. ಅವರು ಆಗಲೆ ಒಂದು ಸಲ ಬಂದಿದ್ದರು. ನೀನು ಮಲಗಿಬಿಟ್ಟಿದ್ದೆ. ”

“ ಆ; ಬಂದರೆ? ಇದೇನು ಆಗಲೇ ದೀಪ ಹಚ್ಚಿಬಿಟ್ಟಿದೆ! ”

“ ಏಳು ಮಹರಾಯ. ನಿನ್ನ ದೆಸೆಯಿಂದ ಕಾಫಿಗೆ ಸೊನ್ನೆ! ಮೂರು ಗಂಟೆಗೆ ಬರಹೇಳಿ ಏಳು ಗಂಟೆಯವರೆಗೂ ನಿದ್ರೆಮಾಡುತ್ತಿದ್ದರೆ ನಮ್ಮ ಗತಿ? ”

“ ಏನು ಶಾರದ, ನೀನಾದರೂ ಎಬ್ಬಿಸಬೇಡವೇ? ಡಾಕ್ಟರನ್ನ ಇಷ್ಟೊತ್ತು ಕಾಯಿಸೋದೇ! ಅವರಿಗೆ ಎಷ್ಟು ಕೆಲಸವಿತ್ತೋ? ”

“ ಯಾರೂ ಕಾಯಲಿಲ್ಲ. ಒಂದು ತಿಂಗಳಿಂದ ನಿಮ್ಮ ಮನೆಗೆ ನಡೆದು ನಡೆದು ದಾರಿ ಸವೆದುಹೋಯಿತು. ಇವತ್ತು ನೀನು ಅನ್ನ ಹಾಕಿಸಿದರಲ್ಲ ಅಂತ ಸಂತೋಷದಿಂದ—ಎಲ್ಲಾ ಜೊತೆಯಲ್ಲಿ ಕಾಫಿ ತೆಗೆದುಕೊಳ್ಳೋಣ ಎಂದು ಬರಹೇಳಿದರೆ ನಾನು ಇನ್ನೊಂದು ಸಲ ಬರೋದು ಹೆಚ್ಚೆ? ಒಂದು ಸಲ ಬಂದೆ; ನೋಡಿದೆ. ನೀನು ಗೊರಕೆ ಹೊಡಿಯುತ್ತಿದ್ದೆ. ಪುನಃ ಹೋಗಿ ಕೆಲಸ ಮುಗಿಸಿ ಕೊಂಡು ಬಂದರೆ, ನೀನು....ಬಹಳ ದಿವಸಕ್ಕೆ ಹೊಟ್ಟೆಗೆ ಅನ್ನ ಬಿತ್ತು....ಸುಖ ವಾಗಿ ಕನಸು ಕಾಣುತ್ತ, ಅದೇನೋ ಸೌಂದರ್ಯ—ನಾನು—ನೀನು ಎಂದು ಕನವರಿಸುತ್ತಿದ್ದೆ. ಈ ಮಧ್ಯೆ ನಮಗೆ ಕಾಫಿ ಚಕ್ಕರ್! ”

“ ಡಾಕ್ಟರೇ, ನಿಮಗೆ ಹಾಸ್ಯ. ಇರಲಿ, ಇರಲಿ! ಶಾರದ, ಎಲ್ಲಿ ಕಾಫಿ? ”

“ ಇಷ್ಟು ಹೊತ್ತಿನಲ್ಲಿ ಯಾಕಪ್ಪ? ”

“ ಕಾಫಿ ಕುಡಿಯಲು ಹೊತ್ತೇನು? ಬೇಕಾದರೆ ಶನಿವಾರ ಮಾಡಿದ ರಾಯಿತು. ”

“ ಇವತ್ತು ಗುರವಾರ. ”

“ ಮತ್ತೂ ಅನುಕೂಲವಾಯಿತು. ಗುರುಗಳ ಹೆಸರಿನಲ್ಲಿ ಒಪ್ಪೊತ್ತು.... ಇದೇನು ಶಾರದ, ಬರೀ ಕಾಫಿ ತಂದೆ? ನೀನೇನೋ ಒಳ್ಳೆ ತಿಂಡಿ ಮಾಡಿರುತ್ತೀ ಎಂದು ನಾನು ಒಪ್ಪೊತ್ತು ಮಾಡಿ ಎಂದು ಹೇಳುತ್ತಿದ್ದೆ. ನೀನು ನನ್ನ ಜೊತೆಗೆ ಅವರಿಗೂ ಪಥ್ಯ ಮಾಡಿಸುವಂತಿದೆಯಲ್ಲ. ”

"ಇಲ್ಲ. ಬೆಳಗ್ಗೆ ಡಾಕ್ಟರೇ ಹೇಳಿದ್ದರು....'ಖಾಯಿಲೆಯವರೆವಿುಗೆ ನಾವು ತಿಂಡಿ ತಿನ್ನುವುದು ಸರಿಯಲ್ಲ. ಬರೀ ಕಾಫಿ ಮಾಡಿಬಿಡು' ಎಂದು— ಆದರಿಂದ ಮಾಡಲಿಲ್ಲ."

"ನಿನಗೆಲ್ಲಿ ಶಾರದ?"

"ತರುತ್ತೇನೆ."

"ಎಲ್ಲಿ, ಅಜ್ಜಮ್ಮ ಕಾಣಿಸುವುದೇ ಇಲ್ಲ. ಡಾಕ್ಟರು ಮಗನಿಗೆ ಅನ್ನ ಹಾಕದೆ ಕೊಲ್ಲುತ್ತಾರೆಂದು ಮೂರು ದಿನ ಊಟ ಬಿಟ್ಟು ಸತ್ಯಾಗ್ರಹ ಮಾಡಿದ ರಲ್ಲ. ನೋಡಿದಿರೋ ಗಾಂಧಿಜೀಯವರ ತತ್ವ ಎಲ್ಲಿಯವರಿಗೆ ಬಂದಿದೆ!"

ಅನಂತ ನಕ್ಕ. ಇಡೀ ಮೂರು ದಿನ ಮತ್ತೇನು ಮಾಡಲು ತೋರ ದಿದ್ದರೂ, ಸ್ನಾನ ಜಪ, ಊಟ ತಿಂಡಿ, ಒಂದರ ಪರಿವೆಯೂ ಇಲ್ಲದೆ ಬಾಗಿಲ ಮರೆಯಲ್ಲಿ ಕುಳಿತು ಕಣ್ಣೀರು ಸುರಿಸುತ್ತಿದ್ದ ತಾಯಿಯ ಚಿತ್ರವು ಕಣ್ಣು ಮುಂದೆ ನಿಂತು ಕರುಳು ಹಿಂಡಿದಂತಾಯಿತು. ಒಂದು ಕಡೆ ತಾಯಿ,—ಒಂದು ಕಡೆ ಶಾರದ. ಅವರಿಬ್ಬರ ಪ್ರೇಮದ ಹೊನಲಿನಲ್ಲಿ ತಾನು ಕೊಚ್ಚಿಹೋಗು ತ್ತಿರುವಂತೆ ತೋರಿತು. ಕೊರಳು ಬಿಗಿದಂತಾಗಿ ಕೆಮ್ಮು ಬಂತು. ಸ್ವಲ್ಪ ಸುಧಾ ರಿಸಿಕೊಂಡು ಹೇಳಿದ—"ನೋಡಿ, ಮನುಷ್ಯನ ಆಸೆಗೆ ಕೊನೆಯಿಲ್ಲ. ಎಂಟು ದಿವಸಗಳ ಕೆಳಗೆ ಬದುಕಿದರೆ ಸಾಕೆಂದಿದ್ದೆ. ಈಗಾಗಲೇ ಬಯಕೆಯು ರೆಕ್ಕೆ ಯನ್ನು ಕೆದರಿ ನಾಲ್ಕು ಕಡೆಗೂ ಹಾರಾಡುತ್ತಿದೆ. ಮಧ್ಯಾಹ್ನ ಬಾಯಾರಿಕೆ ಯಾಯಿತು ಶಾರದ; ನೀನು ಕೊಟ್ಟ ಹಾಲು, ನೀರು ಯಾವುದೂ ಅದನ್ನು ಇಂಗಿಸಲಿಲ್ಲ. ನಮ್ಮ ತೋಟದ ಎಳನೀರಿನ ನೆನಪಾಗಿ ಬಾಯಲ್ಲಿ ನೀರೂರಿತು. ಇನ್ನು ಎಲ್ಲಿಯೂ ಅಂತಹುದು ಸಿಕ್ಕುವುದಿಲ್ಲ."

"ವಿಶ್ವಾಸವು ಎಲ್ಲಿ ಹೆಚ್ಚಾಗಿರುತ್ತೋ ಅಲ್ಲಿ ಎಲ್ಲವೂ ಚೆನ್ನಾಗಿರುತ್ತದೆ."

"ಬರೀ ವಿಶ್ವಾಸವಲ್ಲ ಶಾರದ, ನಿಜಸ್ಥಿತಿ. ಅದು ಬೇಕಾದರೆ ಚಿಕ್ಕಯ್ಯ ನನ್ನೇ ಕೇಳು. ಅಲ್ಲವೇ ಚಿಕ್ಕಯ್ಯ?"

"ಅನಂತು, ನನಗೆ ನಿಜವಾಗಿ ಸಂತೋಷವಾಯಿತು. ಹೊರಗಡೆ ಇದ್ದರೂ ಊರಿನ ಅಭಿಮಾನ ಇಟ್ಟುಕೊಂಡಿದೀಯಲ್ಲ. ಇದರಲ್ಲಿ ಶಾರದನದೇನು ತಪ್ಪು! ನೀನು ಅವಳನ್ನು ಕರೆದುಕೊಂಡು ಬಂದು ಅದರ ರುಚಿ ತೋರಿಸಿದ್ದರೆ ತಾನೆ

ಅವಳಿಗೆ ತಿಳಿಯುವುದಕ್ಕೆ ! ಒರೀ ಎಳನೀರಿ ಅಲ್ಲ ಡಾಕ್ಟರೇ, ಅಲ್ಲಿನ ಗಾಳಿ-ನೀರು ಎಲ್ಲಾದರಲ್ಲೂ ಒಂದು ಬಗೆಯ ಶಕ್ತಿ. ಜನವ್ರೋ? ಅದೇನು ಒಗ್ಗಟ್ಟು ಏನು ಕಥೆ, ಚಿನ್ನ—ಚಿನ್ನದಂಥ ಸ್ವಭಾವ. '

" ಒಳ್ಳೆಯ ಜನ ಎಲ್ಲಾ ಊರಿನಲ್ಲೂ ಇರುತ್ತಾರೆ, ಯಜಮಾನರೇ ! "

" ನಾನು ಹೇಳಲಿಲ್ಲವೇ—ವಿಶ್ವಾಸ ದೊಡ್ಡದು ಎಂದು ! "

" ನಿಜವಾಗಿಯೂ ಶಾರದ, ನಾನು ತಮಾಷೆಗೆ ಹೇಳುತ್ತಿಲ್ಲ. ನೀನು ಖಂಡಿತ ಒಂದು ಸಲ ಅಲ್ಲಿಗೆ ಬಂದು ನೋಡಬೇಕು. ಆಗ ನಿನಗೇ ನನ್ನ ಮಾತಿನ ಸತ್ಯ ತಿಳಿಯುತ್ತೆ. ನಿಮಗೆ—ನಾಗರಿಕರಿಗೆ ಹಳ್ಳಿಯವರೆಂದರೆ ಒಂದು ಬಗೆಯ ತಿರಸ್ಕಾರ. ಆದರೆ ಅವರಿಂದಲೂ ನೀವು ಕಲಿಯತಕ್ಕ ಒಂದು ವಿಚಾರ ಇದೆ. "

" ಅದೇನೋ ! "

" ಅದೇ—ಇದ್ದುದರಲ್ಲಿ ತೃಪ್ತಿಪಟ್ಟುಕೊಂಡು, ಮನೆಯಲ್ಲಿ ನಾಲ್ಕು ಜನ ಇದ್ದರೆ ಒಬ್ಬರಿಗೊಬ್ಬರು ಹೊಂದಿಕೊಂಡು ಸಂತೋಷವಾಗಿರುವುದು. ಇಲ್ಲಿ, ಅದೇ ಇಲ್ಲ. ಮಾತಿಗೆ ಹೇಳುತ್ತೇನೆ. ನಮ್ಮೂರಿನಲ್ಲಿ ಶಾಸ್ತ್ರಿಗಳ ಮನೆಯೆಂದರೆ ಇವ್ವ ವರಿಗೆ ಮಾದರಿ. ಬಡತನದಲ್ಲಿ ಅಷ್ಟು ಸಂತೋಷವಾಗಿ ಇದ್ದರು. ಈಗ ಅವರ ಮೊಮ್ಮಗ ಈಕಡೆ ದೊಡ್ಡ ಕೆಲಸದಲ್ಲಿ ಇದಾನೆ. ಅವರ ಮನೆಯಲ್ಲಿ ಇದ್ದ ಸುಖ-ಸಂತೋಷಗಳಲ್ಲಿ ಹತ್ತರಲ್ಲಿ ಒಂದು ಪಾಲು ಅವನ ಮನೆಯಲ್ಲಿಲ್ಲ. ಅದಕ್ಕೇ ನಾನು ಹೇಳಿದ್ದು, ಅಲ್ಲಿ ಹೋಗಿ ಕಲಿಯಬೇಕು ಎಂದು. ಅವರ ಮನೆ ವಿಚಾರ ಹೇಳಲಿಕ್ಕೆ ಹೊರಟರೆ ಅದಕ್ಕೆ ಮೊದಲಿಲ್ಲ ಕೊನೆಯಿಲ್ಲ. "

" ಪರವಾಯಿಲ್ಲ ಆಗಲಿ. ನಿಮ್ಮೂರಿನ ಎಳನೀರು, ಗಾಳಿ—ನೀರು ಎಲ್ಲಾ ವಿಚಾರವೂ ಆಯಿತು. ಚಿನ್ನದಂತಹ ಜನರ ವಿಚಾರವನ್ನೂ ಕೇಳಿಯೇ ಬಿಡೋಣ. ಹೇಗೂ ಅನಂತರಾಮಯ್ಯ ಒಪ್ಪೊತ್ತು ಎಂದು ಹೇಳಿಯೇ ಇದಾನಲ್ಲ. "

" ಹಾಗಾದರೆ ಕೇಳಿ. ಸಂತೋಷವಾಗಿ ಹೇಳುತ್ತೇನೆ,—ನಮ್ಮೂರೇನೂ ಬಹಳ ದೊಡ್ಡದಲ್ಲ. ಮಧ್ಯಮತರವ ಹಳ್ಳಿ. ಶಾಸ್ತ್ರಿಗಳೆಂದರೆ ಆ ಊರಿಗೆ ಯಜಮಾನರಿದ್ದ ಹಾಗೆ. ಬಹಳ ಮರ್ಯಾದಸ್ಥರು. ಆ ಊರಿನಲ್ಲಿ ಅವರಷ್ಟು ದೊಡ್ಡ

ಸಂಸಾರಿಗಳು ಮತ್ತೊಬ್ಬರಿಲ್ಲ. ಆರು ಜನ ಹೆಣ್ಣುಮಕ್ಕಳು; ಐದು ಜನ ಗಂಡು ಮಕ್ಕಳು. ಮನೆತುಂಬ ಮೊಮ್ಮಕ್ಕಳು. ಇಬ್ಬರು ಹೆಣ್ಣುಮಕ್ಕಳು ಬಾಳ ಸವಿಯನ್ನನುಭವಿಸಿ, ಮಕ್ಕಳೊಂದಿಗೆ ಪುನಃ ತವರನ್ನು ಸೇರಿದ್ದರು. ಶಾಸ್ತ್ರಿಗಳ ಸೊಸೆ ಬಹಳ ಒಳ್ಳೆಯವಳು. ಅವಳ ಗಂಡ ಕೃಷ್ಣಪ್ಪನೂ ಹಾಗೆ. ಊರಿನಲ್ಲಿ ಎಲ್ಲರಿಗೂ ಬೇಕಾದವನಾಗಿದ್ದ. ಆ ಊರಿನ ಸುತ್ತ ಹತ್ತು ಮೈಲಿಗಳವರೆಗೂ ಇರುವ ಹಳ್ಳಿಗಳಲ್ಲೆಲ್ಲಾ ಅವರದೇ ಪೌರೋಹಿತ್ಯ. ಅವುಗಳಲ್ಲಿ ಕೆಲವು ಗೌಡಸಾಹುಕಾರರ ಮನೆಗಳು ಬಹಳ ಹಿಂದಿನಿಂದ ಬಂದುವು. ಅವನ್ನು ಬಿಡುವುದಕ್ಕೆ ಆಗುತ್ತಿರಲಿಲ್ಲ.

"ಹಾಗೆ ನೆರೆಯೂರಿಗೆ ಹೋಗಬೇಕಾದಾಗಲೆಲ್ಲಾ ಶಾಸ್ತ್ರಿಗಳು ಕೃಷ್ಣಪ್ಪನನ್ನೇ ಕಳಿಸುತ್ತಿದ್ದರು. ಅವರಿಗೆ ಊರಿಂದೂರಿಗೆ ಹೋಗಲು ಕೈಲಾಗುತ್ತಿರಲಿಲ್ಲ. ಒಂದುಸಲ ನಮ್ಮೂರಿಗೆ ಎಂಟು ಮೈಲಿಯಲ್ಲಿರುವ ಹಳ್ಳಿಯಲ್ಲಿ ಮದುವೆಯಾಯಿತು. ಗೌಡ ಬಂದು ಶಾಸ್ತ್ರಿಗಳನ್ನು ಖಂಡಿತ ಬರಬೇಕೆಂದು ಕರೆದು ಹೋದ. ಕೃಷ್ಣಪ್ಪ ಊಟಮಾಡಿಕೊಂಡು ಗೌಡ ಕಳುಹಿಸಿದ್ದ ಗಾಡಿಯಲ್ಲಿ ಹೊರಟ. ಒಬ್ಬನೇ ಹೋಗಬೇಕಲ್ಲ ಎಂದು ನನ್ನನ್ನೂ ಕರೆದ. ನನಗೆ ಬೇರೇನೂ ಕೆಲಸವಿರಲಿಲ್ಲವಾಗಿ ನಾನೂ ಹೋದೆ.

"ಮದುವೆಯನ್ನು ಮುಗಿಸಿಕೊಂಡು ನಾವಿಬ್ಬರೂ ಮೂರನೆಯ ದಿನ ಊರಿಗೆ ಹೊರಟೆವು. ಆ ದಿನ ಅವನ ಮನಸ್ಸು ಬಹಳ ಉಲ್ಲಾಸವಾಗಿತ್ತು. ಕಾರಣ—ಗೌಡ ತನ್ನ ಒಬ್ಬನೇ ಮಗನ ಮದುವೆಯನ್ನು ಬಹಳ ಅದ್ದೂರಿಯಾಗಿ ಮಾಡಿದ್ದ. ಬ್ರಾಹ್ಮಣರನ್ನು ತೃಪ್ತಿಪಡಿಸಿದರೆ ಲಕ್ಷ್ಮಿ ಒಲಿಯುತ್ತಾಳೆಂದು ಗೌಡನ ನಂಬಿಕೆ. ಅವನು ಕೃಷ್ಣಪ್ಪನಿಗೆ ಕೈತುಂಬ ದುಡ್ಡು ಕೊಟ್ಟಿದ್ದಲ್ಲದೆ, ತಂದಿದ್ದ ಜವಳಿಯಲ್ಲಿ ಒಂದು ಒಳ್ಳೆಯ ಸೀರೆಯನ್ನು ಅವನ ಮುಂದಿಟ್ಟು "ಚಿಕ್ಕಮ್ಮಾವ್ರಿಗೆ ನಾನು ಅಡ್ಡಬಿದ್ದು ಕೊಟ್ಟೆನೆಂದು ಹೇಳಬೇಕೆಂದು" ಹೇಳಿಕೊಟ್ಟಿದ್ದ. ಕೃಷ್ಣಪ್ಪ ತನ್ನ ಸಂಭಾವನೆಯನ್ನೆಲ್ಲಾ ದೊಡ್ಡದೊಂದು ಪಂಚೆಯಲ್ಲಿ ಕಟ್ಟಿ ಹೆಗಲ ಮೇಲೆ ಹಾಕಿಕೊಂಡ. ತಂಪು ಹೊತ್ತಾದ್ದರಿಂದ ನಡೆದುಕೊಂಡೇ ಹೊರಟೆವು.

"ಹೀಗೆ ಅರ್ಧದಾರಿ ಸಾಗಿರಬಹುದು. ಕೃಷ್ಣಪ್ಪ ನಡುನಡುವೆ ತನ್ನ

ಸಂಭಾವನೆಯ ಗಂಟಿನ ಕಡೆ ನೋಡುತ್ತಿದ್ದ. ಅದರ ಸಂದಿಯಲ್ಲಿ ಸೀರೆಯು ಕಾಣಿಸಿದಾಗೆಲ್ಲಾ ಅವನ ಮನಸ್ಸು ಏನೋ ಒಂದು ಸುಖದ ಕಲ್ಪನೆಯಲ್ಲಿ ತೊಡಗುತ್ತಿತ್ತು. ಬಹುಶಃ ಹೊಸ ಸೀರೆಯುಟ್ಟು ಸಡಗರದಿಂದ ಓಡಾಡುವ ಹೆಂಡತಿಯ ಚಿತ್ರವನ್ನು ಕಲ್ಪಿಸಿಕೊಳ್ಳುತ್ತಿದ್ದಿರಬಹುದು. ಹರೆಯದ ಯೋಚನೆಗಳೇ ಸುಖ ಶಾರದ! ಅದರಲ್ಲೂ ಮನಸ್ಸಿನಲ್ಲಿ ಒಂದು ಆಸೆಯಿದ್ದು, ಅದು ಸಾಧ್ಯವಿಲ್ಲದೆ ಇದ್ದುದರಲ್ಲೇ ತೃಪ್ತಳಾಗಿರುವ ಹೆಂಡತಿ, ಅನೇಕ ಆಸೆಗಳಿದ್ದರೂ, ಬಡತನದಿಂದಲೂ—ದೊಡ್ಡ ಸಂಸಾರದ ನಡುವೆ ಇರುವುದರಿಂದಲೂ—ಯಾವುದನ್ನೂ ನಡೆಸಿಕೊಡಲು ಅನುಕೂಲವಿಲ್ಲದ ಗಂಡ! ಒಬ್ಬರ ಮನಸ್ಸನ್ನೊಬ್ಬರು ಬಲ್ಲರು. ಆ ಸ್ಥಿತಿಯಲ್ಲಿ ಅನಿರೀಕ್ಷಿತವಾಗಿ ಬಯಕೆಯ ವಸ್ತುವೊಂದು ಕೈಸೇರಿರಲು ಅದರಿಂದ ಉಂಟಾಗುವ ಸಂತೋಷವು ಎಂತಹದೆಂಬುದನ್ನು ಹೇಳಲು ಸಾಧ್ಯವಿಲ್ಲ. ಸಿರಿವಂತಿಕೆಯ ಸುಖದಲ್ಲಿ ಬೆಳೆದ ನೀನು ಅವನ್ನು ತಿಳಿಯಬಲ್ಲೆಯಾ ಶಾರದ?"

ಶಾರದ ಸುಮ್ಮನಿದ್ದಳು. ಚಿಕ್ಕಯ್ಯ ಪುನಃ ಹೇಳಿದರು—"ಅಂತೂ ಸುಖದ ಕಲ್ಪನೆಯಲ್ಲಿ ಮುಳುಗಿದ್ದ ಅವನಿಗೆ ದಾರಿಯಮೇಲೆ ಅಷ್ಟಾಗಿ ಗಮನವಿರಲಿಲ್ಲ. ನಾವು ಬರುತ್ತಿದ್ದುದು ಕಾಲುದಾರಿ. ಅಲ್ಲಲ್ಲಿ ಹಳ್ಳತಿಟ್ಟುಗಳು. ಮಳೆಯ ನೀರು ಕೊರೆದು ಅಲ್ಲಲ್ಲಿ ಕೊರಕಲು ಬಿದ್ದಿತ್ತು. ಇದ್ದಕ್ಕಿದ್ದಂತೆ ಸದ್ದಾಯಿತು. ಏನಾಯಿತೆಂದು ತಿರುಗಿ ನೋಡುವಷ್ಟರಲ್ಲಿ, ಕೃಷ್ಣಪ್ಪ ಮುಂದಿದ್ದ ಕಲ್ಲನ್ನು ಎಡವಿ ಕಾಲುಜಾರಿ ಕೊರಕಲಿನಲ್ಲಿ ಬಿದ್ದಿದ್ದ.

"ನಾನು ಅವನ ತಲೆಗೆ ನೀರು ತಟ್ಟಿ, ಅಲ್ಲೇ ದನಗಳನ್ನು ಮೇಯಿಸುತ್ತಿದ್ದ ಹುಡುಗರ ಸಂಗಡ ಊರಿಗೆ ಹೇಳಿ ಕಳುಹಿಸಿದೆ....ಶಾಸ್ತ್ರಿಗಳು ಕೈಕಾಲು ಗೆಟ್ಟು ತಮಗೆ ಬೇಕಾದ ಕೆಲವು ಜನರೊಡನೆ ಗಾಡಿ ತೆಗೆಸಿಕೊಂಡು ಮಗ ಬಿದ್ದಿದ್ದ ಜಾಗಕ್ಕೆ ಬಂದರು. ಕೃಷ್ಣಪ್ಪ ನೋಡುವುದಕ್ಕೆ ಲಕ್ಷಣವಾಗಿದ್ದ. ಬಲವಾದ ಆಳು, ಮುಖದಲ್ಲಿ ಒಳ್ಳೆಯ ವರ್ಚಸ್ಸು....ಮೈಮೇಲೆ ಅಲ್ಲಲ್ಲಿ ಗಾಯಗಳಾಗಿತ್ತು. ಹಣೆಗೊಂದು ಮೊನಚಾದ ಕಲ್ಲು ತಗಲಿ, ರಕ್ತವು ಹರಿದು ಬಟ್ಟೆಯೆಲ್ಲಾ ನೆನೆದು ಹೋಗಿತ್ತು. ಬಿದ್ದ ಭರಕ್ಕೆ ಸೊಂಟದಲ್ಲಿ ಸಿಕ್ಕಿಸಿದ್ದ ಮುಡ್ಡೆಲ್ಲಾ ಚಲ್ಲಾಪಿಲ್ಲಿಯಾಗಿ ಬಿದ್ದಿದೆ! ಗಂಟಿನಲ್ಲಿದ್ದ ಧಾನ್ಯವೆಲ್ಲಾ ಸುತ್ತಲೂ

ಎರಚಿಬಿಟ್ಟಿದೆ. ಇಪ್ಪುಗಳ ನಡುವೆ ಬಿದ್ದಿದ್ದ ಮಗನ ಅವಸ್ಥೆಯನ್ನು ನೋಡಿ ಶಾಸ್ತ್ರಿಗಳಿಗಾದ ದುಃಖ ಹೇಳತೀರದು."

"ಚಿಕ್ಕಯ್ಯ ಇದೇನು ನಮ್ಮ...."

ಚಿಕ್ಕಯ್ಯ ಕಣ್ಣು ಮಿಟಕಿಸಿ ಸುಮ್ಮನಿರುವಂತೆ ಸನ್ನೆ ಮಾಡಿದರು. ಅನಂತು ಹೇಳುತ್ತಿದ್ದವನು ಅಷ್ಟಕ್ಕೇ ಸುಮ್ಮನಾದ. ಶಾರದ,—

"ಆಮೇಲೆ" ಎಂದಳು.

"ಜೊತೆಯಲ್ಲಿ ಬಂದಿದ್ದವರು ಅವನಿಗೆ ಧೈರ್ಯ ಹೇಳಿ, ಗಾಯವನ್ನೆಲ್ಲಾ ತೊಳೆದು ಬಟ್ಟೆಕಟ್ಟಿ ಉಪಾಯವಾಗಿ ಗಾಡಿಯ ಮೇಲೆ ಹಾಕಿಕೊಂಡು ಮನೆಗೆ ಬರುವ ಹೊತ್ತಿಗೆ ಸಾಯಂಕಾಲವಾಗಿತ್ತು....

"ಪಾಪ! ಶಾಸ್ತ್ರಿಗಳ ಸೊಸೆ—ಹದಿನಾರು ವರ್ಷದ ಹುಡುಗಿ—ತನ್ನ ಎಂಟುತಿಂಗಳ ಮಗುವನ್ನೆತ್ತಿಕೊಂಡು ಗಂಡನ ದಾರಿಯನ್ನು ಕಾಯುತ್ತಿದ್ದಳು. ಮೈಯೆಲ್ಲಾ ರಕ್ತಮಯವಾಗಿ ಜ್ಞಾನವಿಲ್ಲದೆ ಗಾಡಿಯಲ್ಲಿ ಹಾಕಿಕೊಂಡು ಬಂದ ಅವನನ್ನು ನೋಡಿ—ಅವಳ ಎದೆ ಒಡೆದುಹೋಯಿತು. ಆದರೆ ಹತ್ತಿರ ಬಂದು ನೋಡಲು ನಾಚಿಕೆ! ಧೈರ್ಯವೂ ನಾಲದು. ದೊಡ್ಡವರು ಯಾರೂ ಅವಳಿಗೆ ನೋಡಲು ಹೇಳಲೂ ಇಲ್ಲ. ಅವಳು ಒಳಗೇ ಕುಳಿತು ಕಣ್ಣೀರು ಸುರಿಸುತ್ತಿದ್ದಳು. ಹೀಗೆ ಎರಡು ದಿವಸ ಕಳೆಯಿತು. ಮೂರನೆಯ ದಿವಸ ಅವನಿಗೆ ಬಹಳ ಸಂಕಟ. ಜ್ಞಾನವು ಚೆನ್ನಾಗಿದ್ದಾಗ ಆಸೆಯಿಂದ ಕಣ್ಣರಳಿಸಿ ನಾಲ್ಕು ಕಡೆಗೂ ನೋಡಿದ. ಮನೆಯವರೆಲ್ಲರೂ ಇದ್ದರು. ಆದರೆ ಯಾರಿಗಾಗಿ ಅವನು ನೋಡಿದನೋ ಅವಳು ಮಾತ್ರ ಇರಲಿಲ್ಲ. ಅವನು ನಿರಾಶೆಯಿಂದ ಕಣ್ಣು ಮುಚ್ಚಿಕೊಂಡ....

"ಅಲ್ಲಿಯೇ ಇದ್ದ ಪಂಡಿತರು ಅವನ ಇಷ್ಟವನ್ನು ತಿಳಿದವರಾಗಿ ಯಜಮಾನಿಗೆ—"ಸೊಸೆಯನ್ನು ಕೂಗಿ; ಅವನಿಗೆ ಇಷ್ಟವಿರುವಂತಿದೆ" ಎಂದರು. ಇದರಿಂದ ಯಜಮಾನಿಗೆ ಸ್ವಲ್ಪ ಅಸಮಾಧಾನವೇ ಆದರೂ ಪಂಡಿತರು ಹೇಳಿದ್ದರಿಂದ ಯತ್ನವಿಲ್ಲದೆ ಲೊಟಗುಟ್ಟಿಕೊಂಡು ಒಳಗೆ ಹೋಗಿ ಸೊಸೆಯನ್ನು ಕರೆದುಕೊಂಡು ಬಂದರು. ಆದರೆ ಅವರು ಹಾಸಿಗೆಯ ಬಳಿಗೆ ಬರುವ ವೇಳೆಗೆ ಅವನ ಪ್ರಾಣ ಹೋಗಿತ್ತು...."

ದೀಕ್ಷಿತರು ಸುಮ್ಮನಾದರು. ಶಾರದ ಕಣ್ಣೀರು ತುಂಬಿದವಳಾಗಿ "ಮುಂದೇನಾಯಿತು ?" ಎಂದು ಕೇಳಿದಳು.

"ಶಾಸ್ತ್ರಿಗಳ ಸೊಸೆಯು ಬಹಳ ದುಃಖಕ್ಕೆ ಗುರಿಯಾದಳು. ಮಗುವನ್ನು ಬಿಟ್ಟರೆ ಅವಳಿಗೆ ಪ್ರಪಂಚದಲ್ಲಿ ಮತ್ತಾರೂ ಇರಲಿಲ್ಲ. ಮಗುವಿನ ಮೇಲಿನ ಮೋಹವು ಬಂಧಿಸದಿದ್ದರೆ, ಅವಳು ಎಂದೋ ಕೆರೆಗೋ ಭಾವಿಗೋ ಬೀಳುತ್ತಿದ್ದಳೇನೋ! ತುಂಬಿದ ಸಂಸಾರ; ಹಳ್ಳಿಯ ಕೆಲಸ. ಅಷ್ಟು ಜನರ ಮರ್ಜಿಯನ್ನು ಅನುಸರಿಸಿ ನಡೆಯುವುದೇನು ಸುಲಭವೇ ಶಾರದ? ಆ ದುಃಖ ಸಾಗರದಲ್ಲಿ ಮಗುವೇ ಅವಳಿಗೆ ಹರಿಗೋಲು! ಆ ಕಂದನ ಮೇಲೆ ತನ್ನ ಜೀವನದ ಆಸೆ-ಭರವಸೆಗಳನ್ನೆಲ್ಲಾ ಹಾಕಿ ದಿನವನ್ನು ಕಳೆಯುತ್ತಿದ್ದಳು... ....

"ಹುಡುಗನು ದೊಡ್ಡವನಾದ. ಶಾಸ್ತ್ರಿಗಳಿಗೆ ಅವನನ್ನು ವೈದಿಕ ವೃತ್ತಿಗೆ ಹಾಕಬೇಕೆಂದು ಇಷ್ಟ. ಆದರೆ ಸೊಸೆಗೆ ಅವನು ಓದಿ ಮುಂದಕ್ಕೆ ಬರಲೆಂದು ಆಸೆ. ಅವಳು ಎಂದೂ ಮಾವನವರ ಹತ್ತಿರ ಮಾತಾಡಿದವಳಲ್ಲ. ನಾದಿನಿಯ ಮೂಲಕ ತನ್ನ ಇಷ್ಟವನ್ನು ಅವರಿಗೆ ತಿಳಿಸಿ ತನ್ನ ಹತ್ತಿರ ಇದ್ದ ಕೆಲವು ಒಡವೆಗಳನ್ನು ತೆಗೆದುಕೊಟ್ಟಳು.

"ಹೇಗೋ ಹುಡುಗ ಕಷ್ಟಪಟ್ಟು ಓದಿದ. ದೇವರ ದಯವೂ ಇತ್ತು. ಪದವೀಧರನಾದ ಮಗನನ್ನು ನೋಡಿ ಆಕೆ ಆನಂದ ಬಾಷ್ಪದಲ್ಲಿ ಅವನ ತಲೆಯನ್ನು ತೊಯ್ಸಿದಳು. ಆ ಹೊತ್ತಿನಲ್ಲಿ ಅವರಿಗೆ ಹಿಂದೆ ನಡೆದದ್ದು, ಆ ಮಗುವನ್ನು ಸಾಕಲು ತಾವು ಪಟ್ಟ ಕಷ್ಟ — ಎಲ್ಲವೂ ನೆನಪಿಗೆ ಬಂದಿರಬೇಕು. ಬಹಳ ಹೊತ್ತು ಅವರಿಗೆ ಮಾತಾಡುವ ಶಕ್ತಿಯೇ ಉಡುಗಿಹೋಗಿತ್ತು....

"ಮಗನಿಗೆ ಮೈಸೂರಿನಲ್ಲಿ ಕೆಲಸವಾಯಿತು. ಆಗ ಅವರ ಸ್ಥಿತಿ ನೆಟ್ಟಗಿದ್ದುದರಿಂದ ದೊಡ್ಡ ನೆಂಟಸ್ತಿಕೆ ದೊರಕಿ ಮದುವೆಯೂ ಆಯಿತು. ಆಗ ತಾಯಿಗೆ ಕಷ್ಟವೇನೂ ಇರಲಿಲ್ಲ: ಆದರೂ ಅವರ ಮನಸ್ಸು ಒಂದು ಬಗೆಯ ಅಸಮಾಧಾನದಿಂದ ತುಂಬಿರುತ್ತಿತ್ತು. ಪುಟ್ಟ ಸಂಸಾರ, ಸೊಗಸಾದ ಬಂಗಲೆ, ಮನೆತುಂಬ ಆಳು ಕಾಳುಗಳು. ಆದರೂ ಅವರ ಮನಸ್ಸು ಪ್ರಸನ್ನವಾಗಿರಲಿಲ್ಲ....ಯಾವ ಸುಖಕ್ಕಾಗಿ ಬಹುಕಾಲ ಹಂಬಲಿಸಿದರೋ, ಆ ಹಂಬಲಿಕೆಯಲ್ಲಿದ್ದ ಸುಖವು ಅನುಭವಿಸುವ ಕಾಲ ಬಂದಾಗ ಅದರಲ್ಲಿ ಕಾಣದೇ ಹೋಯಿತು. ತಾವು ಎಷ್ಟು ಮೋಹದಿಂದ ಮಗನನ್ನು ಸಾಕಿದರೋ ಅಷ್ಟು

ಅಕ್ಕರೆಯನ್ನು ಅವನು ತೋರುತ್ತಿಲ್ಲವೆಂದು ಯೋಚಿಸಿದಾಗ ಅವರ ಕಣ್ಣಿನಲ್ಲಿ ನೀರು ತುಂಬುತ್ತಿತ್ತು. ಆದರೆ ಮದುವೆಯಾದ ಮಗನ ಪ್ರೇಮವು ಹಂಚಿಕೆಯಾಗಿ—, ತಾವು ತೋರುತ್ತಿದ್ದಷ್ಟು ಏಕಾಗ್ರತೆಯನ್ನು ಅವನು ತೋರಿಸುವುದು ಸಾಧ್ಯವಿಲ್ಲವೆಂಬುದು ಅವರ ಮನಸ್ಸಿಗೆ ಬರುತ್ತಿರಲಿಲ್ಲ..... ”

ಶಾರದ ಸುಮ್ಮನೆ ಕೇಳುತ್ತಿದ್ದವಳು,—

“ತಾಯಿಯರು ಮಕ್ಕಳನ್ನು ಅಷ್ಟು ಆಸೆಯಿಟ್ಟುಕೊಂಡು ಬೆಳೆಸುವುದಕ್ಕಿಂತ, ಅದು ತಮ್ಮ ಕರ್ತವ್ಯವೆಂದು ತಿಳಿದು ಬೆಳೆಸುವುದು ಸುಖ” ಎಂದಳು.

“ಹೌದು—ನಿಜ. ಆದರೆ ಅದು ನಿನ್ನಂತಹ ತಿಳಿದವರ ಮಾತಾಯಿತು. ಆದರೆ ಆಕೆ ಇದ್ದ ಸಂದರ್ಭವನ್ನು ನೋಡು”

“ಯಾಕೆ? ಸೊಸೆ ಒಳ್ಳೆಯವಳಲ್ಲವೇ?”

“ಬಹಳ ಒಳ್ಳೆಯವಳು ಶಾರದ! ಆದರೆ ಅತ್ತೆ ಸೊಸೆಯರ ನಡುವೆ ಎರಡು ಧ್ರುವದಷ್ಟು ಅಂತರ. ಸುಖಲೇಶವೂ ಇಲ್ಲದೆ ಬೆಳೆದವರು ಅವರು; ಕಷ್ಟದ ನೆರಳನ್ನೂ ಕಾಣದವಳು ಅವಳು! ಅವಳ ನಾಗರೀಕತೆಗೂ ಇವರ ಪೌಢ್ಯಕ್ಕೂ ಸ್ವಲ್ಪವೂ ಸರಿಹೋಗುವುದಿಲ್ಲ. ಈ ಮಧ್ಯೆ ಸಂಸಾರವು ನಿಸ್ಸಾರ. ಅವರಿಬ್ಬರ ಪ್ರೇಮವೂ ಅವನ ಕಡೆಗೆ ಒಂದೇ ಸಮವಾಗಿ ಹರಿಯುತ್ತಿದ್ದರೂ ಅವನಿಗೆ ಸುಖವಿಲ್ಲ ಇಂತಹ ಸಂದರ್ಭದಲ್ಲಿ ನಡುವೆ ಸಿಕ್ಕಿಕೊಂಡಿರುವವನ ಪಾಡು ಬಹಳ ಕಷ್ಟ ಕತ್ತರಿಯಲ್ಲಿ ಸಿಕ್ಕಿದ ಅಡಕಿಯ ಹಾಗೆ! ಅವನಿಗೆ ಜೀವನ ಬೇಸರವಾಗಿರುವುದೇನೂ ಹೆಚ್ಚಲ್ಲ ಯಾಕೆ ಹೇಳಿದೆ ಅಂದರೆ ಸುಖಕ್ಕೆ ಸಾಮಗ್ರಿ ಮುಖ್ಯವಲ್ಲ. ಅನುಭವಿಸುವ ಮನಸ್ಸು ಬೇಕು. ಏನೋ ನಾಲ್ಕುದಿನದ ಬಾಳು. ಇದ್ದದ್ದನ್ನು ಸರಿಮಾಡಿಕೊಳ್ಳುವುದು ಬುದ್ಧಿವಂತರ ಕೆಲಸ....”

ದೀಕ್ಷಿತರು ಸುಮ್ಮನಾದರು ಡಾಕ್ಟರು ಹೊತ್ತಾಯಿತೆಂದು ಎದ್ದರು. ಶಾರದ ಬಾಗಿಲು ಹಾಕಿಕೊಳ್ಳಲು ಹೋದಳು. ಅನಂತ ಮೆಲ್ಲಗೆ ಕೇಳಿದ,—

“ಚಿಕ್ಕಯ್ಯ, ಇದೇನು? ನಿನ್ನ ಕತೆ.... ಯಾರಿಗಾಗಿ!”

“ಅನಂತು, ನೀನು ತಪ್ಪು ತಿಳಿದುಕೊಳ್ಳಬೇಡ. ನಾನೂ ಹದಿನೈದು ದಿವಸಗಳಿಂದಲೂ ನೋಡುತ್ತಿದ್ದೇನೆ. ಈ ಮನೆಯಲ್ಲಿ ಯಾರಿಗೂ ಸುಖವಿಲ್ಲ.

ಸೀತಮ್ಮ ಬಹಳ ನೊಂದವಳು. ಬಾಳಿನ ಸಂಧ್ಯೆಯಲ್ಲಾದರೂ ಅವಳು ಸ್ವಲ್ಪ ಸುಖವನ್ನು ಕಾಣಲೆಂದು ನನ್ನ ಬಯಕೆ. ಅದಕ್ಕಾಗಿ ಹೀಗ ಹೇಳಿದೆ. ಶಾರದ ಜಾಣೆ; ಒಳ್ಳೆಯ ಮನಸ್ಸು; ಇಂತಹ ಸಂದರ್ಭದಲ್ಲಿ ಏನು ಮಾಡಬೇಕೆಂದು ಯೋಚಿಸದೆ ಇರುವುದಿಲ್ಲ. ಸಮಯವನ್ನು ನೋಡಿ ಕತೆಯ ಕೃಷ್ಣಪ್ಪ ನಿಮ್ಮ ತಂದೆಯೆಂದು ತಿಳಿಸು. ಮುಂದೆ ಎಲ್ಲಾ ಸರಿಹೋಗುತ್ತೆ ಮಲಗಿಕೊಳ್ಳಪ್ಪ. ಆಯಾಸವಾದೀತು. ನಾನೂ ಬೆಳಿಗ್ಗೆ ಮುಂಚೆ ಏಳಬೇಕು ”

* * * *

ಹೀಗೆ ಎಲ್ಲರೂ ಮಾತಿನಲ್ಲಿ ಮಗ್ನರಾಗಿದ್ದಾಗ ಹೊರಗಡೆ ಆದ ಸದ್ದು ಒಬ್ಬರಿಗೂ ಕೇಳಿಸಿರಲಿಲ್ಲ. ಅಷ್ಟು ಹೊತ್ತಿನಲ್ಲಿ ಆಗತಾನೆ ಖಾಯಿಲೆಯಿಂದ ಎದ್ದು ಸುಧಾರಿಸಿಕೊಳ್ಳುತ್ತಿರುವ ಮಗನ ಕೊಠಡಿಯಲ್ಲಿ ಮಾತುಕತೆ ನಡೆಯುತ್ತಿರುವ ದನ್ನು ಕೇಳಿದಕೂಡಲೇ, ಎಲ್ಲೋ ಒಳಗೆ ಇದ್ದ ಸೀತಮ್ಮ ಗಾಬರಿಯಿಂದ ಎದ್ದು ನೋಡಲು ಬಂದಳು. ಒಳಗೆ ನಡೆಯುತ್ತಿದ್ದ ಮಾತು ಅವಳ ಕಿವಿಗೆ ಬಿದ್ದ ಕೂಡಲೇ ಅವಳ ಚೈತನ್ಯವೆಲ್ಲಾ ಎಲ್ಲಿ ಹೋಯಿತೋ! ಕಲ್ಲಿನಂತೆ ನಿಂತುಬಿಟ್ಟಳು. ಎಷ್ಟು ಹೊತ್ತು ಹಾಗೆ ನಿಂತಿದ್ದಳೋ ಅವಳಿಗೇ ಗೊತ್ತಿಲ್ಲ. ಒಳಗೆ ನಡೆಯುತ್ತಿದ್ದ ಮಾತು ನಿಂತು ಅವರುಗಳು ನಿದ್ರೆ ಮಾಡಿದರೂ, ಅವಳು ಮಾತ್ರ ಆ ಜಾಗ ಬಿಟ್ಟು ಕದಲಲಿಲ್ಲ. ಕಣ್ಣೀರ ಕಾಲುವೆಯಂ... ಮಾತ್ರ ಹರಿಯುತ್ತಿತ್ತು!

ನಿಜವಾಗಿ ನೋಡಿದರೆ ಸೀತಮ್ಮ ಯಾವುದನ್ನೂ ಅರಿಯದವಳು. ಮಗನ ಸುಖವೊಂದೇ ಅವಳ ತಾರಕ ಮಂತ್ರ. ಬೆಳಗಿನಿಂದ ರಾತ್ರಿಯವರೆಗೂ ದುಡಿಯುವುದು; ಹಾಕಿದ್ದನ್ನು ತಿಂದು-ಮಗನಿಗಾಗಿ ಹಂಬಲಿಸುವುದು. ಇಷ್ಟೇ ಅವಳ ಜೀವಮಾನದಲ್ಲೆಲ್ಲಾ ಅವಳು ಮಾಡುತ್ತಿದ್ದ ದಿನಚರಿ! ಅದು ಹೊರತು ಅವಳಿಗೆ ಹೊರಗಿನ ಪ್ರಪಂಚವೂ ತಿಳಿಯದು: ಅದರಲ್ಲಿ ಆಗುತ್ತಿರುವ ಬದಲಾವಣೆಗಳೂ ಗೊತ್ತಿಲ್ಲ! ಅವಳಿಗೆ ಇಲ್ಲಿಯ ನಡೆನುಡಿಗಳೊಂದೂ ಸರಿಹೋಗದಿದ್ದುದರಲ್ಲಿ ಆಶ್ಚರ್ಯವೇನೂ ಇಲ್ಲ. ಆದರೆ ಮಗನಿಗೆ ಸುಖವಿಲ್ಲವೆಂಬ ಮಾತು ಅವಳ ಹೃದಯಕ್ಕೆ ನೇರವಾಗಿ ಗುರಿಯಿಟ್ಟ ಬಾಣದಂತೆ ತಾಗಿತು. ಇತರ ವಿಚಾರಗಳು ತಿಳಿಯದಿದ್ದರೂ ಅದನ್ನು ಅರ್ಥಮಾಡಿಕೊಳ್ಳುವುದು ಕಷ್ಟವಾಗಲಿಲ್ಲ. ಯಾವ ಸುಖವು ಅವಳ ಜೀವನದ ಹೆಗ್ಗುರಿಯಾಗಿದ್ದಿತೋ,

ಆ ಗುರಿಯು ತಪ್ಪಲು, ಅವಳ ಮನಸ್ಸು ನೆಲೆಯಿಲ್ಲದಂತೆ ತಲ್ಲಣಿಸಿತು. ತನ್ನ ಸ್ವಂತ ಸುಖವನ್ನು ಅರಿಯದ ಅವಳಿಗೆ ಮಗನ ಮೇಲಿನ ಪ್ರೀತಿಯಲ್ಲಿ 'ತಾನು' ಎಂಬುದು ತರಗೆಲೆಯಂತೆ ಕೊಚ್ಚಿಹೋಯಿತು. ಮಗನ ಸುಖದ ದಾರಿಯಿಂದ ದೂರವಾಗಿರುವುದೊಂದೇ ಅವಳಿಗೆ ಹೊಳೆದ ಉಪಾಯ ಆ ಯೋಚನೆಯೇ ಎದೆಯನ್ನು ಸೀಳುವಂತಿದ್ದರೂ, ಅವಳು ಹಿಂದೆಗೆಯಲಿಲ್ಲ.

ಬೆಳಗಾದರೆ ಎಲ್ಲರಿಗೂ ಅಚ್ಚರಿ! ಸೀತಮ್ಮನು ಗಂಟುಕಟ್ಟಿಕೊಂಡು ಹಳ್ಳಿಗೆ ಹೊರಡಲು ಸಿದ್ಧಳಾಗಿದ್ದಳು. ಯಾರು ಎಷ್ಟು ಹೇಳಿದರೂ ಕೇಳಲಿಲ್ಲ. ರಾತ್ರೆ ಕನಸಿನಲ್ಲಿ ಮಾವನವರನ್ನು ಕಂಡೆನೆಂತಲೂ, ಅವರನ್ನು ನೋಡಿದ ಹೊರತು ಮನಸ್ಸು ಸಮಾಧಾನವಾಗುವುದಿಲ್ಲವೆಂತಲೂ ಹೇಳಿ ಮಧ್ಯಾಹ್ನದ ಗಾಡಿಯಲ್ಲಿ ಹೊರಟೇಹೋದಳು. ಅಲ್ಲಿದ್ದವರಲ್ಲಿ ಯಾರೂ ಆ ಹಟದ ಹಿಂದೆ ಅಡಗಿದ್ದ ಪ್ರೇಮವನ್ನೂ ತ್ಯಾಗವನ್ನೂ ಅರಿಯಲಿಲ್ಲ!

* * * *

ಮಾರನೇ ದಿನ ನೆರೆಮನೆಯಲ್ಲಿ ಮಾತಾಡಿಕೊಳ್ಳುತ್ತಿದ್ದರು—,

"ಕೇಳಿದೆಯಾ, ಸೀತಮ್ಮ ಊರಿಗೆ ಹೊರಟುಹೋದರಂತೆ!"

"ಅಷ್ಟು ಖಾಯಿಲೆಯ ಮಗನನ್ನು ಬಿಟ್ಟು ಹೋಗಲು ಮನಸ್ಸಾದರೂ ಹೇಗೆ ಬಂತೋ?"

"ಏನೋಮ್ಮ. ಪ್ರಪಂಚದಲ್ಲಿ ಎಂತೆಂತಹ ಜನರಿರುತ್ತಾರೋ!!"

## ಪಯಣ

“ಯಜಮಾನರು ದಯಮಾಡಿಸುತ್ತಿರುವರು,” ಎಂದು ಸೇವಕಿಯು ಹೇಳಿದಾಗ ಗೀತಾದೇವಿಯು ಕೊಠಡಿಯಲ್ಲಿ ಒಬ್ಬಳೇ ಕುಳಿತುಕೊಂಡು ಕಿಟಕಿಯ ಆಚೆ ಇದ್ದ ಹೂದೋಟವನ್ನು ನೋಡುತ್ತಿದ್ದಳು. ತಂಗಾಳಿಯು ಒಳಗೂ ಹೊರಗೂ ನುಲಿದಾಡುತ್ತ ಅವಳ ಮುಂಗುರುಳುಗಳನ್ನು ಚವರಿಸುತ್ತಿತ್ತು. ಹೊರಗೆ ಗಿಡ ಬಳ್ಳಿಗಳೆಲ್ಲವೂ ಚಿನ್ನದ ರಸವಲ್ಲಿ ಅದ್ದಿದಂತೆ ಥಳಥಳಿಸುತ್ತಾ ಗಾಳಿಗೆ ಬಳುಕುತ್ತಿದ್ದುವು.

ಗೀತಾದೇವಿಯು “ಈಗ ನೋಡಲು ಅವಕಾಶವಿಲ್ಲ”ವೆಂದು ನೇರ ತಪ್ಪಿಸಿಕೊಳ್ಳಬೇಕೆಂದು ಯೋಚನೆ ಮಾಡುವಷ್ಟರಲ್ಲಿ ಸ್ವಯಂ ರಾಜಾ ರಾಮನಾಥನೇ ಒಳಗೆ ಬಂದುಬಿಟ್ಟಿದ್ದರಿಂದ ದೇವಿಯ ಯೋಚನೆ ಅಲ್ಲಿಗೇ ಕತ್ತರಿಸಿದಂತಾಗಿ ತಟಕ್ಕನೆ ಎದ್ದುನಿಂತಳು.

ರಾಮನಾಥ ಒಳಗೆ ಬಂದವನು ಸೇವಕಿಯನ್ನು ಹೋಗುವಂತೆ ಸನ್ನೆ ಮಾಡಿ ತಾನೂ ಕಿಟಕಿಯ ಬಳಿ ಬಂದು ನಿಂತುಕೊಂಡ. ಹೊರಗೆ ನೋಡಲಾಗಿ ಅಲ್ಲಿನ ಸೌಂದರ್ಯ ಅವನನ್ನೂ ಬೆರಗುಗೊಳಿಸಿತು. ಅವನು ಹುಟ್ಟು ರಸಿಕ; ತುಂಬುಪ್ರಾಯ! ಜೊತೆಗೆ ತಂದೆಯ ಮರಣದಿಂದ ಹೊಸದಾಗಿ ಬಂದ ಅಧಿಕಾರ! ಅಷ್ಟು ಎಳೆಯ ವಯಸ್ಸಿನಲ್ಲಿ ಅಪಾರವಾದ ಸಂಪತ್ತಿಗೂ ದೊಡ್ಡ ಜಹಗೀರಿಗೂ ಏಕಮಾತ್ರ ಅಧಿಕಾರಿ! ಇವೆಲ್ಲವನ್ನೂ ಮೀರಿಸುವಂತೆ ಘನ ಸರಕಾರದವರು ಅವನು ಯುದ್ಧ ಕಾರ್ಯಗಳಿಗೆ ಮಾಡಿದ ಸಹಾಯಕ್ಕಾಗಿ ಆಗ ತಾನೇ ಕೊಟ್ಟ “ರಾಜ” ಎಂಬ ಬಿರುದು ತಲೆಯನ್ನು ಮತ್ತಷ್ಟು ತಿರುಗಿಸಲು ಸಹಾಯವಾಗಿತ್ತು. ತನ್ನ ಪೂರ್ವಿಕರಿಗಿಂತಲೂ ತಾನು ಹೆಚ್ಚು ಎಂಬ ಭಾವನೆ ಅವನಲ್ಲಿ ಉಂಟಾಗಿತ್ತು. ಎಷ್ಟಾದರೂ ಅವನು ಮನೆತನಕ್ಕೆ ಬಿರುದು ಸಂಪಾದಿಸಿದವನು! ಆ ಸಮಯದಲ್ಲಿ ಅವನಿಗೆ ಪ್ರಪಂಚದಲ್ಲೆಲ್ಲಾ ಸುಖ ಸಂತೋಷಗಳೇ ತುಂಬಿ ತುಳುಕುತ್ತಿರುವಂತೆಯೂ ಮತ್ತು ಅವೆಲ್ಲವೂ ತನಗಾಗಿಯೇ ಎಂದೂ ತೋರುತ್ತಿದ್ದುದರಲ್ಲಿ ಆಶ್ಚರ್ಯವೇನೂ ಇಲ್ಲ.

ಗೀತಾದೇವಿ ಹದಿನೇಳು ವಯಸ್ಸಿನ ಅನುಪಮ ಸುಂದರಿ. ಸಾಮಾನ್ಯ ಸ್ಥಿತಿವಂತರ ಮನೆಯಲ್ಲಿ ಹುಟ್ಟಿದವಳು. ಅವಳ ಚೆಲುವೂ, ಬಾಗ್ಮಿಯೂ

ಅವಳನ್ನು ಆ ಪದವಿಗೆ ಏರಿಸಿದ್ದುವು. ಮೂರು ವರ್ಷಗಳ ಕೆಳಗೆ ಕಾರ್ಯಾರ್ಥವಾಗಿ ಅಲ್ಲಿಗೆ ಹೋಗಿದ್ದ ರಾಮನಾಥ ಅವಳನ್ನು ನೋಡಿ ಮುಗ್ಧನಾಗಿ ಕರೆತಂದು ಮದುವೆಯಾಗಿದ್ದನು. ಮೊದಮೊದಲು ಎಲ್ಲವೂ ಸುಗಮವಾಗಿಯೇ ಇತ್ತು. ಆದರೆ ರಾಮನಾಥನು 'ರಾಜಾ ರಾಮನಾಥ' ನಾಗಿ ಅಧಿಕಾರದ ಜೊತೆಗೆ ಗಂಟುಬಿದ್ದ ಹೊಸ ಸಹವಾಸ ಬೆಳೆಯುತ್ತ ಬಂದಾಗ ನಿರ್ಮಲವಾಗಿದ್ದ ಸಂಸಾರಾಕಾಶದಲ್ಲಿ ಅಸಮಾಧಾನದ ಕಾರ್ಮೋಡಗಳು ತಲೆದೋರಲಾರಂಭಿಸಿದ್ದುವು.

"ಈ ದಿನ ದೇವಿಗೆ ಬಹಳ ಅಸಮಾಧಾನವಾದಂತಿದೆ. ಆಗಿನಿಂದ ನಿಂತಿದ್ದರೂ ಕುಳಿತುಕೊಳ್ಳುವಂತ ಕೂಡಾ ಹೇಳಲಿಲ್ಲವಲ್ಲ!" ರಾಮನಾಥ ಚುಚ್ಚುವಂತ ನುಡಿದ.

"ತಮ್ಮ ಮನೆಯಲ್ಲಿ ತಮಗೆ ಉಪಚಾರ ಹೇಳಲು ನಾನೆಷ್ಟರವಳು? ಕೇವಲ ತಮ್ಮ ಇಷ್ಟದ ಮೇಲೆಯೇ ನನ್ನ ಉಳಿವು ಅವಲಂಬಿಸಿದೆ. ನಿಂತಿನ ಸ್ವಾಮಿಗೆ ಬೇಡವಾದವಳೆಂದು ತಿಳಿದ ಕೂಡಲೇ ಈ ಮನೆಯಲ್ಲಿ ನಾನು ಯಾರ ಗಣನೆಗೂ ಬರುವಂತಿಲ್ಲ. ತಮ್ಮ ಹುಬ್ಬಿನ ಸನ್ನೆಯಿಂದ ಯಾರನ್ನು ಹೊರಡಿಸಲು ಸಿದ್ಧವಾಗಿರುವಿರೋ, ಅವಳಿಂದ ಉಪಚಾರವನ್ನು ಬಯಸುವುದು ಯಾವ ನ್ಯಾಯ?"

"ದೇವಿ! ನೀನು ಅನ್ಯಾಯವಾಗಿ ನನ್ನನ್ನು ದೂರುತ್ತೀ! ನಾನು ಯಾರನ್ನೂ ಹೊರಡಿಸುತ್ತಿಲ್ಲ. ನೀನಾಗಿ ಹೋಗಲು ಇಷ್ಟಪಟ್ಟರೆ ನನ್ನ ತಪ್ಪೇನಿದೆ?"

"ಆತ್ಮಗೌರವದಿಂದ ಕೂಡಿದ ಯಾವ ಹೆಂಗಸೂ ಈ ಸಮಯದಲ್ಲಿ ಮತ್ತೇನು ಮಾಡಲೂ ಸಾಧ್ಯವಿಲ್ಲ!"

"ದೇವಿ, ಒಣ ಅಭಿಮಾನಕ್ಕೆ ಮರುಳಾಗುವುದಕ್ಕಿಂತ ವಾಸ್ತವಿಕ ದೃಷ್ಟಿಯಿಂದ ಯೋಚಿಸುವುದು ಮೇಲಲ್ಲವೇ!"

"ಈಚಿನ ದಿನಗಳಲ್ಲಿ ನನ್ನ ಪಾಲಿಗೆ ಯೋಚಿಸುವುದರ ಹೊರತು ಮತ್ತೇನೂ ಉಳಿದಿಲ್ಲ. ಯೋಚಿಸಿದ ಹಾಗೆಲ್ಲಾ ನಾನು ಮೊದಲು ಎಲ್ಲವೂ ನನ್ನದೆಂದು ಹಾಕಿಕೊಂಡಿದ್ದ ಮಾಯೆಯ ಮುಸುಗು ಕಳಚಿಹೋಗಿ ನನ್ನ

ನಿಜವಾದ ಸ್ಥಿತಿಯ ಅರಿವು ಉಂಟಾಗುತ್ತದೆ—ಅಷ್ಟೇಕೆ? ಒಟ್ಟು ಹಿಂದೂ ಹೆಂಗಸರ ಸ್ಥಿತಿಯು ಪಕ್ಷಪಾತಿಗಳಾದ ಶಾಸ್ತ್ರಕಾರರ ಕೈಗೆ ಸಿಕ್ಕಿ ಎಷ್ಟು ಹೀನ ದೆಸೆಗೆ ಇಳಿದಿದೆ ಎಂಬುದು ಮನಸ್ಸಿಗೆ ಕಟ್ಟಿದಂತಾಗಿ, ರಕ್ತವು ಕುದಿಯುತ್ತಿದೆ. ಆದರೆ ... ನನ್ನ ಅಸಹಾಯಕತೆಯು ನೆನಪಿಗೆ ಬಂದಂತೆ ಜೀವನವೇ ಬೇಸರ ವಾಗಹತ್ತಿದೆ."

"ಹಾಗೆಯೇ ಆಗಲಿ: ಎಲ್ಲಾ ಮತವಂತ ಶಾಸ್ತ್ರಕಾರರೆಲ್ಲರೂ ಪಕ್ಷಪಾತಿ ಗಳೆಂದೇ ನಂಬೋಣ. ಅದಿರಲಿ—ನಾನು ಹೇಳುವುದನ್ನು ಕೇಳುವೆಯಾ ದೇವಿ ... ನಾನು ಮತ್ತೊಮ್ಮೆ ಮದುವೆಯಾದರೆ ನಿನ್ನ ಸುಖಕ್ಕೆ ಕುಂದೇನು? ನಿನಗೆ ಯಾವ ಭಾಗದಲ್ಲೂ ಕೊರತೆಯಾಗದಂತೆ ನೋಡಿಕೊಳ್ಳಲು ನಾನಿಲ್ಲವೆ? ಇನ್ನು ಯಾರು ಬಂದರೆ ತಾನೇ ನಿನ್ನ ಜೋಡಿಯಾದಾರು.. !"

"ಕ್ಷಮಿಸಬೇಕು.... ಮಹಾರಾಜರು ವಂಚನೆಯ ಜೊತೆಗೆ ನಟನೆ ಯನ್ನೂ ಕಲಿತುಕೊಂಡಿತಿದೆ! ಹಾಗಾದರೆ ನನ್ನ ಸ್ಥಿತಿಯು ಕಠಿಣತರವಾಗು ವುದು. ತಮ್ಮ ಹೇಳಿಕೆಯಂತೆ ಸುಖವು ಅಷ್ಟು ಸುಲಭವಾಗಿ ಸಿಕ್ಕುವುದಾ ದರೆ ಅದಕ್ಕಾಗಿ ಇಲ್ಲಿ ಇದ್ದು ಏಕೆ ಒದ್ದಾಡಬೇಕು? ತಾವು ದೊಡ್ಡ ಮನಸ್ಸು ಮಾಡಿಕೊಡಲು ಉದ್ದೇಶಿಸುವ ಹಣದಿಂದ; ಅಲ್ಲಿಯೂ ಇದೇ ಕುರ್ಚಿ ಮೇಜು ಗಳನ್ನೂ ಒಡವೆ ವಸ್ತುಗಳನ್ನೂ ಕೊಂಡು ಕೊಂಡು ಸುಖವಾಗಿರಬಹುದಲ್ಲ!"

"ದೇವಿ! ನಾನು ಬಂದಿರುವುದು ನಿನ್ನ ಒಪ್ಪಿಗೆಯನ್ನು ಪಡೆಯುವ ಸಲುವಾಗಿ ಅಲ್ಲದೆ ವಾದಮಾಡುವುದಕ್ಕಲ್ಲ! ತಿಳಿಯಿತೆ?"

"ಮಹಾರಾಜರು ಸ್ವತಂತ್ರರು. ನನ್ನ ಒಪ್ಪಿಗೆಯನ್ನು ಕೇಳುವ ಅವಶ್ಯವಾದರೂ ಏನಿದೆ? ನೀವೇ ಕೇಳಿದ ಮೇಲೆ ನನ್ನ ಮನಸ್ಸು ಬಿಚ್ಚಿ ಮಾತಾಡಲು ಅವಕಾಶವಿರಬೇಕು. ಹಾಗಲ್ಲದೆ ಬಲವಂತದಿಂದ ನನ್ನ ಕೈಲಿ "ಹುಂ" ಅನ್ನಿಸಿದರೆ ಅದು ಒಪ್ಪಿಗೆಯಾಗುತ್ತದೆಯೇ?"

"ಹಾಗಾದರೆ ಕೊನೆಯವರೆಗೂ ನಿನ್ನ ಹಟವನ್ನೇ ಸಾಧಿಸುತ್ತೀ ಯೇನು?"

"ಹೌದು, ನಾನು ಈ ಮನೆಯಲ್ಲಿ ಇರುವವರೆಗೆ ಮತ್ತೊಬ್ಬ ಹೆಂಗಸು ತಮ್ಮ ಅರ್ಧಾಂಗಿಯಾಗಿ ಇಲ್ಲಿಗೆ ಪ್ರವೇಶಿಸುವ ಹಾಗಿಲ್ಲ. ಆದರೆ . ತಾವು

ತಮ್ಮ ಹಟವನ್ನೇ ಸಾಧಿಸುವಿರಾದರೆ—ನನ್ನ ದಾರಿ ಯಾವುದೆಂದು ನನಗೆ ತಿಳಿದಿದೆ. ಇದುವರೆಗೆ ಅನೇಕ ವಿಧವಾದ ಅವಮಾನಗಳನ್ನು ಸಹಿಸಿದುದಾಗಿದೆ ಆದರೆ....ಇದು...."

"ನಾನು ಕೇಳುವುದೂ ಅದೇ! ಅಗೆಲ್ಲ ಹೇಗೆ ಸಹಿಸಿದೆ?"

"ಅದರ ವಿಚಾರವೇ ಬೇರೆ. ಎಲ್ಲಾ ಎಳೆಯತನ; ಕೆಲವು ದಿನ ಕಳೆದರೆ ಬೆಲೆವೆಣ್ಣಿಗೂ, ಪ್ರಿಯ ಪತ್ನಿಗೂ ಇರುವ ವ್ಯತ್ಯಾಸವನ್ನು ತಿಳಿದು ವಿವೇಕಿಗಳಾಗಿ ಹಿಂತಿರುಗುವಿರೆಂಬ ಭರವಸೆಯಿಂದ ಸುಮ್ಮನಿದ್ದೆ. ಆದರೆ ನನ್ನ ಊಹೆ ತಪ್ಪಾಯಿತು. ಮಹಾರಾಜರು ಅದೆಲ್ಲಾ ಕಳೆಯುವ ವೇಳೆಗೆ ಮತ್ತೊಂದು ಸಂಬಂಧ ಮಾಡಿಕೊಳ್ಳಲು ತಯಾರಾಗುವಿರೆಂದು ಕನಸಿನಲ್ಲಿಯೂ ನೆನಸಿರಲಿಲ್ಲ...."

ರಾಮನಾಥನ ಮುಖವು ಕೋಪದಿಂದ ಕೆಂಪೇರಿತು. ಸ್ವಲ್ಪ ಒರಟಾಗಿಯೇ ಹೇಳಿದ, . "ಶ್ರೀಮತಿ 'ಹರಿಣಿ' ಬೆಲೆವೆಣ್ಣಲ್ಲ, ಸದ್ಗೃಹಿಣಿ!"

"ಮಹಾರಾಜರ ಶಬ್ದಕೋಶದಲ್ಲಿ 'ಗೃಹಿಣಿ' ಪದಕ್ಕೆ ಬೇರೆ ಅರ್ಥವಿರುವಂತಿದೆ! ಯಾವಳು ಕೈ ಹಿಡಿದ ಗಂಡನನ್ನು ವಂಚಿಸಿ, ಮತ್ತೊಬ್ಬ ಮನುಷ್ಯನಲ್ಲಿ ...ಅವನು ಜಹಗೀರುದಾರನೇ ಆಗಲಿ .. ಯಾರೇ ಆಗಲಿ.... ಮನಸ್ಸು ಇಟ್ಟು, ಅವನ ಸಂಸಾರವನ್ನು ಮುರಿಯಲು ಯತ್ನಿಸುವಳೋ— ಅವಳು 'ಸದ್ಗೃಹಿಣಿ!' ಹಾಗಾದರೆ ನಮ್ಮ ಸಂಸಾರ ಸುಖದಲ್ಲಿ ವಿಷವನ್ನು ಬೆರಸಲು ತನ್ನ ಮಗಳನ್ನು ತಮಗೆ ಧಾರೆಯೆರೆಯಲು ಒಪ್ಪಿರುವವನೂ 'ಸದ್ಗೃಹಸ್ಥ'ನೇ!"

"ಹೌದು, ದೇವಿ—ನಿನ್ನ ಮಾತು ನಿಜ. ಅವನು ದೊರೆಯನ್ನು ದೇವಾಂಶನೆಂದು ನಂಬಿ ನನ್ನ ಮಾತನ್ನು ಮೀರದಿರುವ ಸತ್ಪ್ರಜೆ!"

ಗೀತಾದೇವಿಯು ಸುಮ್ಮನಿದ್ದಳು. ಅವಳ ದೃಷ್ಟಿಯು ನೆಲದ ಮೇಲಿತ್ತು. ಅವಳ ನೀಳವಾದ ಕಣ್ಣಿರೆಪ್ಪೆಗಳು ಅರ್ಧ ಮುಚ್ಚಿದಂತಾಗಿ ಮುಖಕ್ಕೆ ಒಂದು ಬಗೆಯ ಗಾಂಭೀರ್ಯವನ್ನು ಕೊಟ್ಟಿತ್ತು. ಧ್ಯಾನಮಗ್ನಳಾದ ದೇವಿಯಂತೆ ತೋರುತ್ತಿದ್ದ ಅವಳನ್ನು ರಾಮನಾಥ ಮೌನವಾಗಿ ನೋಡುತ್ತಿದ್ದ.

ಸ್ವಲ್ಪ ಹೊತ್ತಿನ ಮೇಲೆ ದೇವಿಯು ತಟಕ್ಕನೆ ತಲೆಯೆತ್ತಿ, "ಪ್ರಭು ಲಲಿತಾದೇವಿಯು ನಿಜವಾಗಿಯೂ ಅಷ್ಟು ಸುಂದರಿಯೆ?" ಎಂದು ಕೇಳಿದಳು.

ರಾಮನಾಥ ನಕ್ಕು ಹೇಳಿದ, "ದೇವಿ ನಿಜವಾಗಿ ಹೇಳಬೇಕಾದರೆ,.... ನಿನ್ನನ್ನು ಮೀರಿಸಿರುವ ಸುಂದರಿಯನ್ನು ಇದುವರೆಗೆ ನಾನು ನೋಡಿಲ್ಲ. ಆದರೆ....ಮನುಷ್ಯನ ಮನಸ್ಸು ಯಾವಾಗಲೂ ಸೌಂದರ್ಯಕ್ಕೇ ಶರಣಾಗತ ವಾಗಿರುವುದಿಲ್ಲ. ಅವಳನ್ನು ನೋಡಿದಾಗಿನಿಂದ ನನ್ನ ಮನಸ್ಸು ಅಂಕೆಯಲ್ಲಿಲ್ಲ. ಹೀಗಾಗಲು ಕಾರಣವೇನೆಂದು ಕೇಳಿದರೆ ಹೇಳಲಾರೆ. ದೈವಸೃಷ್ಟಿಯಲ್ಲಿ ಇದೂ ಒಂದು ವಿಚಿತ್ರ. ಇದನ್ನು ಹೃದಯ ದೌರ್ಬಲ್ಯವೆಂದಾದರೂ ಹೇಳು, ಅಥವಾ....ದೇವಿ. ನಿನ್ನ ಮನಸ್ಸು ಬದಲಾಯಿಸಿ ಅಪ್ಪಣೆಕೊಡು. ಸುಮ್ಮನೆ ಹಗರಣ ಮಾಡಬೇಡ."

"ಕ್ಷಮಿಸಬೇಕು. ಇದೊಂದು ವಿಚಾರದಲ್ಲಿ ತಮ್ಮ ಮಾತನ್ನು ನಡೆಸಲು ಸಾಧ್ಯವಿಲ್ಲವಾಗಿದೆ....ಪ್ರಭು! ನನಗೆ ಹೊರಡಲು ಅನುಮತಿ ಕೊಡಬೇಕು."

"ಇದೇ ನಿನ್ನ ಕೊನೆಯ ನಿರ್ಧಾರವೇ? ದೇವಿ!"

"ಹೌದು."

"ನಾನು ಅಂತಹ ತಪ್ಪುಮಾಡಿರುವುದಾದರೂ ಏನು? ರಾಜರಿಗೆ ಅನೇಕ ಪತ್ನಿಯರಿರುವುದು ಪುರಾಣಕಾಲದಿಂದಲೂ ಬಂದಿರುವ ರೂಢಿ. ಆದರೆ ಯಾವ ರಾಜಮಹಿಷಿಯೂ ಹೀಗೆ ಮಾಡಿದ್ದಿಲ್ಲ!"

"ಪುರಾಣ ಕಾಲದಲ್ಲಿ ಶ್ರೀರಾಮನಂತಹ ರಾಜರೂ ಇದ್ದರು!....ಅದೂ ಅಲ್ಲದೆ ಇತಿಹಾಸವು ಯಾವಾಗಲೂ ಬದಲಾಗದೆ ಒಂದೇಸಮ ಇರುವುದಿಲ್ಲ."

ರಾಮನಾಥ ಸ್ವಲ್ಪ ಹೊತ್ತು ಸುಮ್ಮನಿದ್ದು ಬಳಿಕ ಬಹು ಮೃದುವಾಗಿ, "ಗೀತ" ಎಂದು ಕರೆದನು.

ದೇವಿ ಬೆಚ್ಚಿದಳು. ಆ ಧ್ವನಿ-ಆ ಸಂಬೋಧನೆ ಎರಡೂ ಕಳೆದುಹೋದ ಸುಖದ ದಿನಗಳನ್ನು ನೆನಪಿಗೆ ತಂದುವು. ಕಲ್ಲಿನಂತೆ ಗಟ್ಟಿಮಾಡಿಕೊಂಡಿದ್ದ ಮನಸ್ಸು ಕರಗಿದಂತಾಗಿ ಕಣ್ಣಲ್ಲಿ ನೀರಾಡಿತು.

"ಗೀತಾ, ಮದುವೆಯಾದ ತರುಣದಲ್ಲಿ ನಾವು ಎಷ್ಟು ಸುಖವಾಗಿ ದ್ದೆವು! ಈಗ ನನ್ನ ಮನೋದೌರ್ಬಲ್ಯದಿಂದ ಇಷ್ಟು ತೊಂದರೆಗೆ ಕಾರಣ ವಾಗಿದೆ. ನೀನು ದೊಡ್ಡ ಮನಸ್ಸು ಮಾಡಿ ಒಪ್ಪಿದರೆ, ನನ್ನ ಹುಚ್ಚು ಸಮಾ

ಧಾನವಾದಂತಾಗಿ ಮುಂದೆಯೂ ನಮ್ಮ ಭಾಗಕ್ಕೆ ಸುಖದ ದಿನಗಳು ಬರಬಹುದು. ನನಗಾಗಿ ಇಷ್ಟು ಸಹಿಸಲಾರೆಯಾ !....''

ಹೇಳುತ್ತಾ ರಾಮನಾಥ ಗುಲಾಬಿಯಂತಿದ್ದ ಅವಳ ಕೈಯನ್ನು ತನ್ನ ಕೈಯಿಂದ ಸವರುತ್ತ ನೀರು ತುಂಬಿಯೂ ತುಳುಕದೆ ಇದ್ದ ಕಣ್ಣುಗಳ ಕಡೆ ಆತುರದಿಂದ ನೋಡಿದ.

ಗೀತಾದೇವಿ ಒಂದು ಕ್ಷಣ ಎಲ್ಲವನ್ನೂ ಮರೆತಳು. ಅವಳ ಸಿಟ್ಟು, ಅಭಿಮಾನ, ಹಟ—ಎಲ್ಲವೂ ಅವಳನ್ನು ಬಿಟ್ಟು ಜಾರಿಹೋಗುತ್ತಿರುವಂತೆ ತೋರಿತು. ಅವನ ಹಿಡಿತವೊಂದು ಮಾತ್ರ ನಿಜವಾಗಿ ತೋರಿ, ಆದರಿಂದ ಬಿಡಿಸಿಕೊಳ್ಳಲು ಸಾಧ್ಯವಿಲ್ಲದ ಹಾಗೆ ಆಯಿತು. ಒಂದು ಬಗೆಯ ಅಸಹಾಯಕತೆಯು ಅವಳನ್ನು ಆವರಿಸುತ್ತ ಬಂತು. ತುಂಬಿದ ಕಣ್ಣುಗಳನ್ನು ಕಾತರತೆಯಿಂದ ಅವನ ಕಡೆಗೆ ತಿರುಗಿಸಿದಳು.

ನಡುಗುವ ಕೈಗಳಿಂದ ಅವಳ ಮನಸ್ಸಿನ ಸ್ಥಿತಿಯನ್ನು ತಿಳಿದ ರಾಮನಾಥನ ಮುಖದಲ್ಲಿ ಗೆಲುವಿನ ನಗು ಸೂಸುತ್ತಿತ್ತು.

ದೇವಿ ಅದನ್ನು ನೋಡಿ ಬೆಟ್ಟಿಬಿದ್ದಳು. ಕರಗಿ ಮೃದುವಾಗುತ್ತಿದ್ದ ಹೃದಯವು ಒಮ್ಮೆಗೇ ಸೆಟೆದುಕೊಂಡು ಕಲ್ಲಿನಂತಾಯಿತು. ತನ್ನಲ್ಲಿಯೇ ತನಗೆ ತಿರಸ್ಕಾರ ಹುಟ್ಟಿದಂತಾಗಿ ಸರಕ್ಕನೆ ಕೈ ಎಳೆದುಕೊಂಡಳು.

ರಾಮನಾಥ ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲವಲ್ಲ ಎಂದು ನೊಂದುಕೊಂಡು—ಬೇಟೆಯ ಗುರಿತಪ್ಪಲು ಇನ್ನೂ ಮುಂದೆ ಅಟ್ಟಿಸಿಕೊಂಡು ಹೋಗುವ ಬೇಟೆಗಾರನಂತೆ ಎರಡು ಹೆಜ್ಜೆ ಮುಂದಿಟ್ಟು, ಪುನಃ ಕೈ ಹಿಡಿದುಕೊಂಡು—"ದೇವಿ, ನೀನು ಒಂದು ಮಾತ್ರ ಯೋಚಿಸಲಿಲ್ಲ. ಇಂದು ನೀನು ಹುಡುಗಿ; ಅದನ್ನು ತಿಳಿಯಲಾರೆ. ಅದೃಷ್ಟವು ಚೆನ್ನಾಗಿದ್ದು ಆಗುವ ಯೋಗವಿದ್ದರೆ, ನಾಳೆ ನಿನ್ನ ಮಗನು ನನ್ನ ಸಕಲಸಂಪತ್ತಿಗೂ, ಜಹಗೀರಿಗೂ ಒಡೆಯನಾಗುವನು. ನೀನು ಹೊರಟುಹೋಗಿ ಎಂದೆಂದಿಗೂ ಅದಕ್ಕೆ ಅವಕಾಶವೇ ಇಲ್ಲದಂತೆ ಮಾಡಿಕೊಳ್ಳುತ್ತೀಯೆ. ಭವಿಷ್ಯತ್ತಿನ ಗರ್ಭದಲ್ಲಿ ಅಡಗಿರುವ ಆ ಮಗುವಿನ ಸ್ಥಾನಮಾನಗಳನ್ನು ಹೀಗೆ ಭ್ರಷ್ಟಗೊಳಿಸಲು ನಿನಗೆ ಯಾವ ಅಧಿಕಾರವೂ ಇಲ್ಲ" ಎಂದನು.

ರಾಮನಾಥ ಕೊನೆಯ ಅಸ್ತ್ರವೆಂದು ಆ ಮಾತು ಹೇಳಿದ. ಅದು ತನ್ನ ಗುರಿಯನ್ನು ಮುಟ್ಟಿತು. ಹೆಂಗಸಿನ ಹೃದಯದಲ್ಲಿ ಚಿಕ್ಕಂದಿನಿಂದಲೂ ಸುಪ್ತ ವಾಗಿ ಅಡಗಿರುವ ಮಾತೃಪ್ರೇಮವು ಜಾಗರಿತವಾದಂತಾಗಿ ಅವಳ ಹೃದಯವು ಕ್ಷಣಕಾಲ, ಕಾಣದ ಸುಖಕ್ಕಾಗಿ ಹಂಬಲಿಸಿತು.. ಆದರೆ ರಾಮನಾಥ ಒಂದಾ ಗುತ್ತಲೊಂದು ಕಾರಣವನ್ನೊಡ್ಡಿ,—ತನ್ನ ತಾಯ್ತನದ ಅಭಿಮಾನವನ್ನು ಕೆಣಕಿ, ತನ್ನ ಇಷ್ಟವನ್ನು ಸಾಧಿಸಿಕೊಳ್ಳಲು ಹವಣಿಸುತ್ತಿರುವನಲ್ಲದೆ, ಅದು ಅವನು ಮನಃಪೂರ್ವಕವಾಗಿ ಆಡಿದ ಮಾತಲ್ಲವೆಂದು ಅವಳ ಮನಸ್ಸಿಗೆ ಹೊಳೆಯಲು ಆ ಭಾವವೂ ಅಡಗಿ ಹೋಗಿ, ಅವಳ ಅಭಿಮಾನವೂ, ಹಟವೂ ಇಮ್ಮಡಿಯಾಗಿ ತಲೆ ಎತ್ತಿತು. ದೇವಿಯು ತಿರಸ್ಕಾರದಿಂದ, "ಅಗ್ನಿ ಸಾಕ್ಷಿ ಯಾಗಿ ಕೈಹಿಡಿದ ಪತ್ನಿಯ ಸುಖವನ್ನೂ ಸ್ಥಾನಮಾನಗಳನ್ನೂ ನಿಷ್ಕಾರಣ ವಾಗಿ ಭ್ರಷ್ಟಗೊಳಿಸಲು ಸಿದ್ಧರಾಗಿರುವವರಿಗೆ, ಕಣ್ಣಿಗೆ ಕಾಣದ—ಇನ್ನೂ ಈ ಜಗತ್ತನ್ನೇ ಪ್ರವೇಶಿಸದಿರುವ, ಜೀವಿಯ ಸ್ಥಾನಮಾನಗಳನ್ನು ಕಾಯಲು ನನಗೆ ಅಪ್ಪಣೆ ಮಾಡುವುದಕ್ಕೆ ಅಧಿಕಾರವೆಲ್ಲಿಯದು?" ಎಂದಳು.

ರಾಮನಾಥ ಕ್ಷಣಕಾಲ ರೋಷದಿಂದಲೂ, ಅಭಿಮಾನದಿಂದಲೂ, ಮೆರೆ ಯುತ್ತಿದ್ದ ದೇವಿಯ ಮುಖವನ್ನು ನೋಡುತ್ತಿದ್ದವನು ಏನೂ ಹೇಳದೆ ತಲೆಯನ್ನು ತಗ್ಗಿಸಿಕೊಂಡು ನಿದಾನವಾಗಿ ಕೊಠಡಿಯಿಂದ ಹೊರಗೆ ಹೋದನು.

* * * *

ಬೆಳಗಾಯಿತು. ಸೂರ್ಯನು ಮೇಲೇರುತ್ತಿದ್ದನು. ಹಕ್ಕಿಗಳು ಉದಯ ರಾಗವನ್ನು ಹಾಡುತ್ತಿದ್ದುವು. ಗೀತಾದೇವಿಯು ರೈಲಿನ ಕಿಟಕಿಯಿಂದ ರಂಗು ರಂಗಾಗಿ ಕಂಗೊಳಿಸುತ್ತಿದ್ದ, ಆಕಾಶವನ್ನು ದಿಟ್ಟಿಸುತ್ತಿದ್ದಳು. ಊರು ಹತ್ತಿರ ವಾದಂತೆ ಅವಳ ಮನಸ್ಸು ಬಾಲ್ಯದಲ್ಲಿ ಆಡಿದ ಆಟಪಾಟಗಳನ್ನು ನೆನೆದು ಖಿನ್ನವಾಗುತ್ತಿತ್ತು. ಕೆಲವು ವರ್ಷಗಳ ಹಿಂದೆ ರಾಮನಾಥನ ಜೊತೆ ಮೊದಲು ಸಲ ಆ ದಾರಿಯಲ್ಲಿ ಬಂದಾಗ ಅವಳಿಗೆ ಪ್ರಪಂಚವೆಲ್ಲವೂ ಸೌಂದರ್ಯ ದಿಂದಲೂ ಸುಖದಿಂದಲೂ ತುಂಬಿರುವಂತೆ ತೋರಿತ್ತು. ಈಗ ಅವಳ ಸ್ಥಿತಿಯು

ಅದಕ್ಕೆ ತೀರಾ ವಿರುದ್ಧವಾಗಿತ್ತು. ರೈಲಿನ ವೇಗಕ್ಕಿಂತ ಹೃದಯದ ಉದ್ವೇಗವು ಜೋರಾಗಿತ್ತು. ಎರಡು ದಿನಗಳಿಂದಲೂ ಒಂದೇ ಸಮ ಪ್ರಯಾಣ ಮಾಡಿದ ಆಯಾಸದಿಂದ ದೇಹವು ಬಾಡಿದಂತಾಗಿತ್ತು. ನಿದ್ರೆಯಿಲ್ಲದೆ ಕಣ್ಣುಗಳು ಕೆಂಪಾಗಿದ್ದುವು. ರಾತ್ರಿ ಹಗಲೂ ಬೇಸರವಿಲ್ಲದೆ ಕಿಟಕಿಯಿಂದ ಹೊರಗೆ ನೋಡುತ್ತಿದ್ದಳು. ಏನು ನೋಡುತ್ತಿದ್ದಳೋ ಅವಳಿಗೇ ಗೊತ್ತಿಲ್ಲ!

ಹೊತ್ತು ಏರುತ್ತ ಬಂದಿತು. ಸೇವಕಿಯು ತಟ್ಟೆಯಲ್ಲಿ ಫಲಾಹಾರವನ್ನು ತಂದಳು. ದೇವಿಯು ತಾನು ಎಂದೂ ಕಾಣದ ಯಾವುದರ ಕಡೆಗೋ ನೋಡುವಂತೆ ನೋಡಿ, ಏನೆಂದು ತಿಳಿಯಲಾರದವಳಂತೆ ಹಾಗೇ ನೋಟವನ್ನು ಬೇರೆ ಕಡೆಗೆ ತಿರುಗಿಸಿಕೊಂಡಳು. ಸೇವಕಿಯು ಒಡತಿಯ ಸ್ಥಿತಿಯನ್ನು ನೋಡಿ ಏನೂ ಹೇಳಲಾರದೆ, ಕಣ್ಣೀರು ಒರಸಿಕೊಳ್ಳುತ್ತ ಹೋದಳು. ಬಿಸಿಲಿಳಿದು ಕತ್ತಲಾಗುತ್ತ ಬಂತು. ಆದರೂ ದೇವಿಯು ಕುಳಿತ ಬಳಿಯಿಂದ ಎದ್ದಿರಲಿಲ್ಲ.

ರಾಮನಾಥನ ಅಧಿಕಾರವು ತನ್ನ ದೇಹದ ಮೇಲೇ ಅಲ್ಲದೆ ಹೃದಯದ ಮೇಲೂ ಎಷ್ಟು ಬಲವಾಗಿ ಇದೆ ಎಂಬುದು ಆಗಲೀಗ ಅವಳಿಗೆ ಸ್ವಲ್ಪ ಸ್ವಲ್ಪವಾಗಿ ಅರಿವಾಗುತ್ತ ಬಂದಿತ್ತು: ಅವನನ್ನು ಬಿಟ್ಟು ದೂರ ಇರುವುದು ತಾನು ಎಣಿಸಿದಷ್ಟು ಸುಲಭವಲ್ಲವೆಂದು ತೋರಿ—ಮುಂದೆ ದಿನಗಳನ್ನು ಹೇಗೆ ತಳ್ಳುವುದೆಂಬ ಯೋಚನೆ ಹೃದಯವನ್ನು ಇರಿಯುತ್ತಿತ್ತು. ಆಗ ಅವಳ ಮನಸ್ಸಿನಲ್ಲಿ ಏಳುತ್ತಿದ್ದ ಭಾವನಾತರಂಗಗಳನ್ನು ವಿವರಿಸಲು ಯಾರಿಗೆ ಸಾಧ್ಯ! ನಡುನಡುವೆ ಅವಳ ಯತ್ನವನ್ನು ಮೀರಿ ಕಣ್ಣಿನಿಂದ ಒಂದೊಂದು ತೊಟ್ಟು ನೀರು ಉರುಳಿದಾಗ ಅದನ್ನು ಒರಸಿಕೊಳ್ಳಬೇಕೆಂದು ಕೂಡ ತೋರದೆ ಸುಮ್ಮನೆ ಇರುತ್ತಿದ್ದಳು.

ದೇವಿಯು ಬಹಳ ಹೊತ್ತು ನಿಶ್ಚಲಳಾಗಿ ಕುಳಿತಿದ್ದಳು. ಬಳಿಕ ದೇಹವು ಒಂದು ಪಕ್ಕಕ್ಕೆ ವಾಲಿತು. ದೇವಿಯು ತನಗೆ ತಿಳಿಯದೆಯೇ ನಿದ್ರೆಯ ಜೊಂಪಿಗೆ ಸಿಕ್ಕಿದ್ದಳು.

"ಆದಿನ ಕಾರ್ತಿಕ ಹುಣ್ಣಿಮೆ. ಬೆಳದಿಂಗಳಿನಲ್ಲಿ ಇಬ್ಬರೂ ವಿಹಾರಕ್ಕೆಂದು ನಾವಿನಲ್ಲಿ ಹೊರಟಿದ್ದರು. ಅಂಬಿಗರಾರೂ ಬೇಕಿಲ್ಲವೆಂದು ಹೇಳಿ

ಸ್ವಯಂ ರಾಮನಾಥನೇ ಹುಟ್ಟು ಹಾಕುತ್ತಿದ್ದ. ಗೀತಾದೇವಿಯು ಹುಡುಗಿಯಂತೆ, ಸಂತೋಷವು ಅಂದಿನ ಬೆಳದಿಂಗಳಿನಂತೆ ಹೃದಯವನ್ನು ತುಂಬಿ ಹೊರಸೂಸುತ್ತಿರಲು--ತೆರೆಗಳ ಮೇಲೆ ನಲಿಯುತ್ತಿದ್ದ ಚಂದ್ರನನ್ನು ಕೈ ಬೆರಳುಗಳಿಂದ ಕೆಣಕಿ ಆಟವಾಡುತ್ತಿದ್ದಳು. ಚಂದ್ರ ಥರಥರನೆ ನಡುಗಿ ಅವಳಿಗೆ ಸಿಕ್ಕಿದಂತೆ ತೋರಿ ಅವಳು ಬೆರಳಾಡಿಸುವುದನ್ನು ಬಿಡಲು ಮತ್ತೆ ನಗುತ್ತ ಎದುರಿಗೆ ಬರುತ್ತಿದ್ದ. ದೇವಿಯು ಪುನಃ ಅವನನ್ನು ಹಿಡಿಯಲು ಪ್ರಯತ್ನ ಪಡುತ್ತಿದ್ದಳು. ರಾಮನಾಥ ಈ ಆಟವನ್ನು ನೋಡಿ ನಗುತ್ತ ಸಣ್ಣ ದನಿಯಲ್ಲಿ ಪ್ರೇಮಗೀತೆಯೊಂದನ್ನು ಹಾಡುತ್ತಿದ್ದ. ದೇವಿ ಆಟವನ್ನು ಬಿಟ್ಟು ಅವನ ಭುಜದಮೇಲೆ ತಲೆಯಿಟ್ಟುಕೊಂಡು ಹಾಡನ್ನು ಆಲಿಸುತ್ತಿದ್ದಳು. ಸುಂದರವಾದ ನದಿಯ ವಕ್ಷ, ಹಿತವಾಗಿ ಬೀಸುತ್ತಿರುವ ಗಾಳಿ, ತೊಟ್ಟಿಲಿನಂತೆ ತೂಗುತ್ತಿದ್ದ ನಾವು. ಇವೆಲ್ಲಾ ಸೇರಿದ ಮೇಲೆ ಹೇಳಬೇಕೆ! ಅವಳಿಗೆ ಯಾವಾಗಲೋ ನಿದ್ರೆ ಬಂದುಬಿಟ್ಟಿತು:

"ಮೈಮೇಲೆ ಮಳೆಯ ತುಂತುರು ಹನಿಗಳು ಬಿದ್ದು ತಣ್ಣಗಾಗಲು ಎಚ್ಚರವಾಗಿ ದೇವಿಯು ತಟಕ್ಕನೆ ಕಣ್ಣುಬಿಟ್ಟು ನೋಡಿದಳು. ಚಂದ್ರನು ಮೋಡದಲ್ಲಿ ಮರೆಯಾಗಿ ಕತ್ತಲು ಕವಿದು ತುಂತುರು ಮಳೆ ಬೀಳುತ್ತಿತ್ತು. ಅವಳಿಗೆ ತಾನು ಎಲ್ಲಿರುವೆನೆಂಬುದು ಬೇಗ ಗೊತ್ತಾಗಲಿಲ್ಲ. ನಿದ್ದೆಯ ಮಬ್ಬು ಕಡಿಮೆಯಾಗಲು ಅವಳಿಗೆ ಎಲ್ಲವೂ ನೆನಪಿಗೆ ಬಂದು ಲಜ್ಜೆಯಿಂದ ಪಕ್ಕಕ್ಕೆ ತಿರುಗಿ ನೋಡಿದಳು. ಏನು ಕೇಡು! ರಾಮನಾಥ ಅಲ್ಲಿಲ್ಲ! ದೋಣಿಯು ಮಾತ್ರ ತಟಸ್ಥವಾಗಿ ನಿಂತಿದೆ. ತಾನಿರುವುದು ನದಿಯ ಮಧ್ಯವೋ—ದಡವೋ ಒಂದೂ ಗೊತ್ತಾಗಲೊಲ್ಲದು. ಸುತ್ತಲೂ ಕತ್ತಲೆ.

"ದೇವಿಯು ಸ್ವಭಾವವಾಗಿ ಸಾಹಸಿ; ಹಳ್ಳಿಯ ಸ್ವತಂತ್ರವಾತಾವರಣದಲ್ಲಿ ಬೆಳೆದವಳು. ಒಂಟಿಯಾಗಿರುವುದಕ್ಕೂ ಕತ್ತಲೆಗೂ ಹೆದರುವಂಥವಳಲ್ಲ. ಆದರೆ ರಾಮನಾಥ? ಅವನು ಏನಾದ!

"ದೇವಿಗೆ ದಿಗ್ಭ್ರಮೆ ಹಿಡಿದಂತಾಯಿತು. ಸಾಲದುದಕ್ಕೆ ನಿದ್ರೆಯ ಮಬ್ಬು ಪೂರಾ ಹರಿದಿರಲಿಲ್ಲ. ಆ ವೇಳೆಯಲ್ಲಿ ಸಮಂಜಸವಾದ ಯೋಚನೆಗಿಂತಲೂ

ಅಸಂಬದ್ಧವೇ ತೋರುವುದು ಸಹಜ! ಅವಳು ತಾನಿರುವ ಜಾಗದ ಅರಿವಿಲ್ಲದೆ ಹುಚ್ಚಿಯಂತೆ ಅವನನ್ನು ಹುಡುಕುವಂತೆ ಮುಂದೆ ನುಗ್ಗಿದಳು. ದೋಣಿಯು ಓರೆಯಾದಂತಾಗಿ ನೀರಿಗೆ ಉರುಳಿದಳು!

"ರಾಮನಾಥ ದೋಣಿಯನ್ನು ದಡಕ್ಕೆ ಕಟ್ಟಿ ಮರೆಯಲ್ಲಿ ನಿಂತು ನೋಡುತ್ತಿದ್ದ. ತನ್ನ ಹುಡುಗಾಟವು ಈ ರೀತಿ ಪರಿಣಮಿಸಿದುದನ್ನು ನೋಡಿ, ಓಡಿ ಬಂದು ಅವಳನ್ನು ಹಿಡಿದುಕೊಂಡ.

"ದೇವಿಗೆ ಎಚ್ಚರವಾದಾಗ ಮನೆಯಲ್ಲಿ ಮಂಚದಮೇಲೆ ಮಲಗಿದ್ದಳು. ಬಾಲಸೂರ್ಯನ ಕಿರಣಗಳು ಕೊಠಡಿಯನ್ನು ಬೆಳಗುತ್ತಿದ್ದುವು. ಖಿನ್ನನಾಗಿ ಅವಳ ಹಾಸಿಗೆಯ ಬಳಿ ಕುಳಿತಿದ್ದ ರಾಮನಾಥ—ಅವಳು ಕಣ್ಣು ತೆರದುದನ್ನು ನೋಡಿ, "ಕ್ಷಮಿಸು—ದೇವಿ! ಎಚ್ಚರವಾಯಿತೇ?" ಎಂದನು"

ದೇವಿ ಕನಸು ಹರಿದು ಕಣ್ಣುಬಿಟ್ಟಳು. ನಿಜವಾಗಿಯೂ ರಾಮನಾಥನು ಪಕ್ಕದಲ್ಲಿ ಕುಳಿತುಕೊಂಡು ನಸುನಗುತ್ತ, "ಎಚ್ಚರವಾಯಿತೆ? ಗೀತ!" ಎಂದನು.

ದೇವಿ ತಟಕ್ಕನೆ ಎದ್ದು ಕುಳಿತಳು, ಇದು ನಿಜವೋ—ಇಲ್ಲ ಇನ್ನೂ ಕನಸೋ? ತಡವರಿಸುತ್ತ ಕೇಳಿದಳು,—

"ಇದೇನು? ತಾವು ಇಲ್ಲಿ! ನಾನು ಕನಸು ಕಾಣುತ್ತಿರುವೆನೆ?"

"ಇಲ್ಲ. ಗೀತ ಇದು ಸತ್ಯ. ನಾನು ನಿನ್ನ ರಾಮನಾಥ. ನನ್ನ ಮೂರ್ಖತನಕ್ಕಾಗಿ ನಿನ್ನಲ್ಲಿ ಕ್ಷಮೆಯನ್ನು ಬೇಡಿ ಹಿಂದಕ್ಕೆ ಕರೆದುಕೊಂಡು ಹೋಗಲು ಬಂದಿದೇನೆ...."

"ಇದೂ ನಿಜವೇ? ಹಾ....ಗಾ....ದ....ರೆ ಲಲಿತಾದೇವಿ?"

"ಆ ಮಾತು ಮರೆತುಬಿಡು ಗೀತ! ನಾವು ಊರನ್ನು ತಲಪುವ ವೇಳೆಗೆ ಅವಳು ಮದುವೆಯಾಗಿ ತನ್ನ ಮನೆಯಲ್ಲಿರುತ್ತಾಳೆ. ದೇವಿ! ನೀನಿಲ್ಲದೆ ನನ್ನ ಬದುಕು ನೀರಸ. ನೀನು ಹೋದ ಕೂಡಲೆ ತಿಳಿಯಿತು—ನಾನು ಕಳೆದುಕೊಂಡುದು ಎಂತಹ ರತ್ನವೆಂದು! ಆಗಿನಿಂದಲೂ ಒಂದು ಕ್ಷಣವೂ ಚಿತ್ತಸ್ವಾಸ್ಥ್ಯವಿಲ್ಲದೆ ತೊಳಲುತ್ತಿದೇನೆ...."

ರಾಮನಾಥ ಏನೋ ಯೋಚಿಸುವವನಂತೆ ಸುಮ್ಮನಿದ್ದು ನಗುತ್ತ ಮತ್ತೆ ಹೇಳಿದ,

" ದೇವಿ! ನೀನು ಧೈರ್ಯವಂತಳು. ಅಭಿಮಾನದಿಂದ ಪ್ರೇಮವನ್ನೂ ಮರೆತು ದೂರವಾಗಿರಲು ಪ್ರಯತ್ನಪಟ್ಟೆ. ನಾನು....ಅಭಿಮಾನವನ್ನೂ ಬಿಟ್ಟು ನಿನ್ನ ಬಳಿ ಪ್ರೇಮಕ್ಕಾಗಿ...."

" ಯಾರು ಧೈರ್ಯವಂತರು? ಪ್ರೇಮವನ್ನು ಮರೆಯಲು ಶಕ್ತಿಯುಳ್ಳವರು! ನಾನೇ ಪ್ರಭು....?" ಎಂದು ಕೇಳುತ್ತ ಗೀತಾದೇವಿಯು ಉಡಿಯೊಳಗೆ ಕೈಹಾಕಿ ಎರಡು ದಿನಗಳಿಂದಲೂ ಅವಳ ಕಣ್ಣೀರಿನಿಂದ ನೆನೆದು ಹೋಗಿದ್ದ ರಾಮನಾಥನ ಚಿತ್ರವನ್ನು ಹೊರಗೆ ತೆಗೆದು ತೋರಿಸಿದಳು.

---

## 'ಅರವಿಂದ'    

ಕೈ-ಲಾ-ಸಾ-ಧಿ-ಪ-ತಿ....ಜಯಾ, ಕೈ-ಲಾ-ಸಾ-ಧಿ-ಪ-ತಿ, ಜೈ ಗೌರೀ ಶಂಕರ....ಕಾಶಿ ವಿಶ್ವನಾಥ...."

" ಮುಂದಕ್ಕೆ ಹೋಗಿಬಾಪ್ಪ!"

" ತಾಯಿ, ಭಿಕ್ಷೆ..."

" ಎಷ್ಟು ಹೊತ್ತಿಗೋ ಬರೋದು? ಎಲ್ಲರಿಗೂ ಊಟವಾಯಿತು."

" ....ಕೈ-ಲಾ-ಸಾ-ಧಿ-ಪ-ತೇ....ಜಯಾ...."

" ಒಳ್ಳೇ ವೊಂಡರು, ಕೊಟ್ಟೆ ಸಾಲ ಇವರಿಗೆ! ಹೋಗು ಎಂದರೂ

ಹೋಗುವುದಿಲ್ಲ" ಎಂದು ಲೊಟಗುಟ್ಟುತ್ತಾ ಬಂದು ಒಬ್ಬಾಕೆ ಅಕ್ಕಿ ಹಾಕಿ, ಒಳಗೆ ಹೋಗುವಾಗ ಅಂಗಳದ ಕಡೆ ಬಾಗಿಲು ಹಾಕಿದ್ದುದನ್ನು ನೋಡಿ, "ಇದೇನು ಇವತ್ತು ಇಷ್ಟು ಹೊತ್ತಾದರೂ ಗುಂಡಮ್ಮ ಮನೆಗೆ ಬಂದಿಲ್ಲ" ಎಂದುಕೊಂಡಳು.

ಗುಂಡಮ್ಮ ವಾಸ್ತವವಾಗಿ ಒಳಗೇ ಇದ್ದಳು. ಮನೆಯಲ್ಲಿ ಇಲ್ಲವೆಂದು- ಕೊಂಡಾಕೆ ಬಾಗಿಲನ್ನು ತಳ್ಳಿ ನೋಡಿದ್ದರೆ ನಿಜಾಂಶವು ಗೊತ್ತಾಗುತ್ತಿತ್ತು. ಆದರೆ ಆವಳಿಗೆ ಹಾಗೆ ನೋಡಬೇಕಾದ ಪ್ರಮೇಯವಿರಲಿಲ್ಲ. ಗುಂಡಮ್ಮ ಒಳಗಿದ್ದು ಬಾಗಿಲು ಮುಚ್ಚುವುದೆಂದರೆ ಯಾರ ಮನಸ್ಸಿಗೂ ಹೊಳೆಯುವ ವಿಷಯ ಅದು. ಆ ವಠಾರದಲ್ಲಿದ್ದ ಹತ್ತು ಸಂಸಾರಗಳಲ್ಲಿ ದೊಡ್ಡವರು ಚಿಕ್ಕವರಾದಿಯಾಗಿ ಎಲ್ಲರಿಗೂ ಗುಂಡಮ್ಮನ ಸ್ವಭಾವ ಮನವರಿಕೆಯಾಗಿತ್ತು. ಮನೆಯಲ್ಲಿದ್ದರೆ ಬಾಗಿಲು ತೆಗೆದಿರುವುದು, ಹೊರಗೆ ಹೋದರೆ ಬಾಗಿಲು ಮುಂದಕ್ಕೆ ಹಾಕಿಕೊಂಡು ಹೋಗುವುದು, ಅಷ್ಟೆ!

ಆ ಬಾಗಿಲು ಬೀಗವನ್ನು ಕಂಡದ್ದೇ ಇಲ್ಲ! ಅದಕ್ಕೆ ಎರಡು ಕಾರಣ. ಅಷ್ಟು ಜನಗಳ ನಡುವೆ ಇದ್ದ ತನ್ನ ಮನೆಗೆ ಯಾರೂ ಕಳ್ಳತನಕ್ಕೆ ಬರುವುದಿಲ್ಲ. ಒಂದುವೇಳೆ ಬಂದರೂ, ಅಲ್ಲಿದ್ದ ಎರಡು ಒಡಕು ಪಾತ್ರೆ, ಮುರುಕು ಮರ, ಒಂದು ಹರಕು ಸೀರೆ, ಇವುಗಳ ವಿಷಯ ಗುಂಡಮ್ಮನನ್ನು ಎಂದೂ ಬಾಧಿಸಿದಂತೆ ತೋರಲಿಲ್ಲ.

ಗುಂಡಮ್ಮ ಒಂಟಿಯಾಗಿದ್ದರೂ, ಅವಳ ಜೀವನ ಒಂಟಿಯಾಗಿರಲಿಲ್ಲ. ನೆರೆಹೊರೆಯವರ....ಅಷ್ಟೇ ಏಕೆ, ಊರಿನ ಬಹುಜನರ ಕಷ್ಟಸುಖಗಳೊಡನೆ ಅದು ಮಿಳಿತವಾಗಿದ್ದಿತು. ಮದುವೆಯಿಂದ ಮಸಣದವರೆಗೆ ಗುಂಡಮ್ಮನಿಲ್ಲದ ಜಾಗವಿಲ್ಲ. ಅವಳಿಗೆ ಯಾವಾಗಲೂ ಬಿಡುವಿಲ್ಲ. ಇವತ್ತು ಅವರ ಮನೆಯಲ್ಲಿ ಮದುವೆ; ಹಪ್ಪಳ, ಸಂಡಿಗೆ, ಚಕ್ಕುಲಿಹಿಟ್ಟು ಮೊದಲಾದುವೆಲ್ಲಾ ಆಗಬೇಕು; ಅಣಿಮಾಡುವುದಕ್ಕೆ ಮೊದಲಾದರೆ, ಬೀಗರು ಹೊರಟುಹೋಗುವವರೆಗೂ ಅವಳಿಗೆ ಒಂದುಕ್ಷಣ ಪುರುಸೊತ್ತಿಲ್ಲ. ತನ್ನ ಮನೆಯ ಕೆಲಸದಂತೆ ಶ್ರದ್ಧೆ ಯಿಂದ ಮಾಡುವುದು ಅವಳ ಸ್ವಭಾವ. ಮದುವೆ ಮುಗಿದರೆ ಮನೆಯವರಿಗೆ ಬಿಡುವು. ಆದರೆ ಗುಂಡಮ್ಮನಿಗಿಲ್ಲ! ಆ ವೇಳೆಗೆ ಮತ್ತೊಂದು ಮದುವೆಯೋ

ಮುಂಜಿಯೋ ಏನಾದರೂ ಒಂದು ಸಿದ್ಧವಾಗಿರುತ್ತಿತ್ತು. ಅವಳ ಮುರುಕು ಮನೆಯಲ್ಲಿ ಎಷ್ಟು ಮದುವೆ ಮುಂಜಿಗಳ ಹಪ್ಪಳ ಸಂಡಿಗೆಗಳು ತಯಾರಾಗಿದ್ದುವೋ ದೇವರೇ ಬಲ್ಲ !

ನಾನು ಗುಂಡಮ್ಮನನ್ನು ಮೊದಲು ನೋಡಿದ್ದು ನಮ್ಮ ಸಂಬಂಧಿಗಳೊಬ್ಬರ ಮನೆಯಲ್ಲಿ. ಅವರ ಮಗಳು ಖಾಯಿಲೆಯಾಗಿ ಆಸ್ಪತ್ರೆಯಲ್ಲಿದ್ದಳು. ಮನೆಯಲ್ಲಿ ಇನ್ನಾರೂ ಹೆಂಗಸರಿಲ್ಲ. ಯಜಮಾನಿ ಮನೆಗೆಲಸಗಳನ್ನು ಮುಗಿಸಿ ಇತರ ಮಕ್ಕಳು, ಕೋರ್ಟು ಕಛೇರಿಗಳಿಗೆ ಹೋಗುವವರು, ಇವರನ್ನೆಲ್ಲಾ ಸುದಾರಿಸಿ ಆಸ್ಪತ್ರೆಗೆ ತಿರುಗುವುದೆಂದರೆ ಅಸಾಧ್ಯವೇ ಸರಿ. ಆ ಸಮಯದಲ್ಲಿ ಗುಂಡಮ್ಮ ಅವರಿಗೆ ಮಾಡಿದ ಸಹಾಯ ಎಂದಿಗೂ ಮರೆಯುವಂತಹುದಲ್ಲ. ಹಗಲೂ ರಾತ್ರಿ, ಆಸ್ಪತ್ರೆಗೆ ಹಾಲು ಕಾಫಿ ಗಂಜಿ ಮೊದಲಾದುವನ್ನು ಹೊತ್ತು ಅಲೆಯುವುದು, ರಾತ್ರಿ ಅಲ್ಲೇ ಮಲಗಿದ್ದು ಮಧ್ಯಾಹ್ನ ಹುಡುಗಿಗೆ ಆಹಾರವನ್ನು ಕೊಟ್ಟಮೇಲೆ ೧೨ ಗಂಟೆ ಮಟಮಟ ಬಿಸಿಲಿನಲ್ಲಿ, ಒಂದುವರೆ ಮೈಲಿ ದೂರವಿದ್ದ ಮನೆಗೆ ಬರುವುದು, ಸ್ನಾನಮಾಡಿ ಆಗ ಒಂದಿಷ್ಟು ಅನ್ನ ಬೇಯಿಸಿಕೊಂಡು, ಒಂದಿಷ್ಟು ಉಪ್ಪಿನಕಾಯಿ, ಮಜ್ಜಿಗೆ ಹಾಕಿಕೊಂಡು ಊಟಮಾಡುವುದು. ( ಮನೆಯವರು ಬೇರೆ ಜನವಾದ್ದರಿಂದ ಗುಂಡಮ್ಮ ಅವರ ಮನೆಯಲ್ಲಿ ಊಟಮಾಡುತ್ತಿರಲಿಲ್ಲ. ) ಸಾಮಾನ್ಯವಾಗಿ ಗುಂಡಮ್ಮ ಬಳಕೆಯಾಗಿ ಓಡಾಡುತ್ತಿದ್ದುದು ಅವಳ ಸ್ವಜನಗಳಿಗಿಂತ ಇತರ ಜನರಲ್ಲೇ ಹೆಚ್ಚಾಗಿತ್ತು. ಅದರಿಂದ ಮದುವೆ ಮುಂಜಿಗಳಾಗಿ ಮನೆಯವರೆಲ್ಲಾ ಪಂಚಭಕ್ಷ್ಯ ಪರಮಾನ್ನ ಉಂಡರೂ ಗುಂಡಮ್ಮನ ಪಾಲಿಗೆ ಮಾತ್ರ ಗೊಜ್ಜು ಅನ್ನವೇ ಆಗುತ್ತಿತ್ತು.

ಊಟವಾದ ಮೇಲೆ ಒಂದು ಘಳಿಗೆ ಸುದಾರಿಸಿಕೊಂಡು ಪುನಃ ಕಾಫಿ ತೆಗೆದುಕೊಂಡು ಹೋದರೆ, ನಾಳೆ ಮಧ್ಯಾಹ್ನವೇ ಊಟಕ್ಕೆ ಬರುತ್ತಿದ್ದುದು. ಅದುವರೆಗೂ ಆ ಪ್ರಾಣಿ ಬಾಯಿಗೆ ಒಂದು ತೊಟ್ಟು ನೀರೂ ಸಹ ಹಾಕುವಂತಿರಲಿಲ್ಲ.

ಈ ದಿನಚರಿ ಸುಮಾರು ಮೂರು ತಿಂಗಳು ನಡೆದಿರಬಹುದು. ಹುಡುಗಿಗೆ ಹುಷಾರಾಗಿ ಮನೆಗೆ ಬಂದ ದಿನ ತಾಯಿಗಿಂತಲೂ ಗುಂಡಮ್ಮನೇ ಹೆಚ್ಚಾಗಿ

ಸಂತೋಷಪಟ್ಟು, ತನ್ನ ಶ್ರಮವು ಈಗ ಸಾರ್ಥಕವಾಯಿತೆಂದು ದೇವರನ್ನು ಕೊಂಡಾಡುತ್ತ, ಹೊತ್ತ ಹೊರೆಯನ್ನು ಇಳುಕಿದಂತೆ ನಿರಾತಂಕವಾಗಿ ತನ್ನ ಮನೆಗೆ ಹೋಗಿ ರಾಶಿಯಾಗಿ ಬಿದ್ದಿದ್ದ ಧೂಳವನ್ನು ಗುಡಿಸಿಹಾಕಿ, ಆರಾಮವಾಗಿ ಮಲಗಿಕೊಂಡು ಕಣ್ಣು ತುಂಬ ನಿದ್ರೆ ಮಾಡಿದಳು.

ನಾನು ಎರಡು ಮೂರು ದಿವಸ, ಪೇಟೆ ಕಡೆ ಹೋಗಿ ಹಿಂದಿರುಗಿ ಬರುತ್ತಿರುವಾಗ ದಾರಿಯಲ್ಲಿ, ತಡಪು ಸೀರೆಯನ್ನು ಸುತ್ತಿ, ಉದ್ದವಾಗಿ ಮುಸುಕು ಹಾಕಿಕೊಂಡು ಆಸ್ಪತ್ರೆಯಿಂದ ಮನೆಗೆ ಬರುತ್ತಿರುವ ಗುಂಡಮ್ಮನನ್ನು ನೋಡಿದ್ದೆ. ಉರಿಬಿಸಿಲು, ಕೆಳಗಡೆ ಕಾದು ಅಂಟುತ್ತಿರುವ ಟಾರು ರಸ್ತೆ. ಬರಿಯ ಕಾಲಿನಲ್ಲಿ, ಬೆವರು ಹರಿಸುತ್ತ ನಡೆದು ಬರುತ್ತಿದ್ದರೂ, ಅವಳ ಮುಖದಲ್ಲಿ ಮುಗುಳು ನಗೆಯು ಮಾತ್ರ ಮರೆಯಾಗಿರಲಿಲ್ಲ. ನಾನು ಗಾಡಿಯನ್ನು ನಿಲ್ಲಿಸಿ "ಹೇಗಿದ್ದಾಳೆ ಗುಂಡಮ್ಮ ನಿಮ್ಮ ಮಗಳು?" ಎಂದು ಕೇಳಿದೆ. ಗುಂಡಮ್ಮ ನಗುತ್ತ "ನೀನೂ ಹಾಗೇ ಕೇಳುತ್ತೀಯಾ? ಮನೆಗೆ ಹೋದರೆ ಅವಳ ಅಪ್ಪ ಅಮ್ಮ ಹಾಗೇ ಕೇಳುತ್ತಾರೆ. ಪುಣ್ಯಾತ್ಮರ ಮಗು ಎಲ್ಲಿಯಾದರೂ ಚೆನ್ನಾಗಿರಲಿ; ನನ್ನ ಹೆಸರು ಯಾಕೆ ಹೇಳುತ್ತೀರಿ?—ಅಂತ ನಾನು. ನಿತ್ಯವೂ ಇದೇ ಚರ್ಚೆ ಮನೆಯಲ್ಲಿ" ಎಂದು ಹೇಳಿದಳು. 'ಮನೆ' ಎಂದರೆ ಅವರ ಮನೆ. ಗುಂಡಮ್ಮ ಯಾರ ಮನೆಯಲ್ಲಿದ್ದರೂ ಅದು ತನ್ನ ಮನೆಯಂತೆಯೇ ತಿಳಿದು ನಡೆಯುತ್ತಿದ್ದಳು. ಆದ್ದರಿಂದ ಅವಳ ಮಾತಿನಲ್ಲೂ ಅದೇ ವ್ಯಕ್ತವಾಗುತ್ತಿತ್ತು. ಇನ್ನು ಅಲ್ಲಿ ಅವಳ ಸಹಾಯದ ಆವಶ್ಯಕತೆ ಏನೂ ಇಲ್ಲದೆ ತನ್ನ ಮನೆಗೆ ಹೋಗಬೇಕಾಗುವವರೆಗೆ ಅವಳಿಗೆ ತನ್ನ ಆ ಮನೆಯ ನೆನಪೇ ಆಗುತ್ತಿರಲಿಲ್ಲ.

ಈ ವಿಶೇಷ ಗುಣಗಳನ್ನು ನೋಡಿ ನಾನು ಗುಂಡಮ್ಮನ ವಿಚಾರದಲ್ಲಿ ಗೌರವವನ್ನಿಟ್ಟಿದ್ದೆ. ಅಲ್ಲಿಂದ ಮುಂದೆ ಗುಂಡಮ್ಮ ನಮ್ಮ ಮನೆಗೆ ಬಂದು ಹೋಗುವುದು ಹೆಚ್ಚಾಯಿತು. ಏನೂ ಕೆಲಸವಿಲ್ಲದಿದ್ದರೂ, ಆ ಬೀದಿಗೆ ಬಂದರೆ ಗುಂಡಮ್ಮ ನಮ್ಮ ಮನೆಗೆ ಬಾರದೆ ಹೋಗುತ್ತಿರಲಿಲ್ಲ. ಬಂದು ಅಲ್ಲಿ ಇಲ್ಲಿಯ ಮಾತುಗಳನ್ನು ಆಡುತ್ತ ಕುಳಿತಿದ್ದು, ಇದ್ದ ಏನಾದರೂ ಹಣ್ಣು ಹಂಪಲನ್ನು ಕೊಟ್ಟರೆ ಎಷ್ಟೋ ಸಂತೋಷದಿಂದ ಬಾಯಿಗೆ ಹಾಕಿಕೊಂಡು

ಹೋಗುತ್ತಿದ್ದಳು. ಸಾಮಾನ್ಯವಾಗಿ ಸ್ನೇಹವಿಶ್ವಾಸಗಳು ಏಕಮುಖವಾಗಿ ನಡೆದುಬರುವುದಿಲ್ಲ. ಅದರಿಂದಲೇ ನಾನು ಅವಳಲ್ಲಿ ಇಟ್ಟಿದ್ದಂತೆಯೇ ಗುಂಡಮ್ಮ ನನ್ನಲ್ಲಿ ಹೆಚ್ಚು ಆತ್ಮೀಯತೆಯನ್ನು ತೋರಿಸುತ್ತ, ತನಗೆ ಬೇಸರವಾದಾಗ, ಅಥವಾ ಮನಸ್ಸು ಏನಾದರೂ ನೊಂದಾಗ ನನ್ನನ್ನು ಹುಡುಕಿಕೊಂಡು ಬರುತ್ತಿದ್ದಳೆಂದು ಕಾಣುತ್ತದೆ. ಆ ಸಮಯಗಳಲ್ಲಿ ಅವಳು ಆಡಿದ ಕೆಲವು ಮಾತುಗಳಿಂದ ಅವಳ ಹಿಂದಿನ ಜೀವನದ ವಿಚಾರವನ್ನು ಸ್ವಲ್ಪಮಟ್ಟಿಗೆ ತಿಳಿದುಕೊಂಡಿದ್ದೆ.

ಒಂದು ದಿನ ಅವಳು ನಮ್ಮ ಮನೆಗೆ ಬಂದಾಗ ನಾನು, " ಗುಂಡಮ್ಮ, ಈ ಸಲ ಮದುವೆ ಮನೆಗಳೆಲ್ಲಾ ನಿಮ್ಮ ಓಡಾಟವಿಲ್ಲದೆ ಬಿಮ್ಮೆನ್ನುತ್ತಿತ್ತು. ಎರಡು ಮೂರು ಕಡೆಗಳಲ್ಲಿ ' ಗುಂಡಮ್ಮ ಖಾಯಿಲೆ ಮನೆಗೆ ಒಪ್ಪಿಕೊಂಡು ನಮಗೆ ಕೈಕೊಟ್ಟಳು. ನಮ್ಮ ಮೇಲೆ ವಿಶ್ವಾಸ ಕಡಿಮೆಯಾಯಿತು ' ಎಂದು ನನ್ನ ಸಂಗಡ ದೂರಿದರು. ಲಗ್ನಕಾಲದಲ್ಲಿ ( ನಾಲ್ಕು ಕಾಸು ಸಂಪಾದನೆಯಾಗುವಂಥ ಕಾಲದಲ್ಲಿ ) ನಿಮಗೆ ಅದು ಗಂಟುಬಿದ್ದಿತು " ಎಂದು ಹೇಳಿದೆ.

" ಒಳ್ಳೆಯದಾಯಿತು. ನಾನು ಹೋಗದೇ ಮದುವೆಯೇನು ನಿಂತು ಹೋಯಿತೆ? ದುಡ್ಡು ಕೊಟ್ಟರೆ ಮೈಸೂರಿನಲ್ಲಿ ಕೆಲಸದವರಿಗೇನು ಕಮ್ಮಿ? ಮದುವೆಮನೆಗೆಂದರೆ ಯಾರಾದರೂ ಮಾಡುತ್ತಾರೆ. ಖಾಯಿಲೆ ಕಸಾಲೆ ಎಂದರೆ ಯಾರು ಸಿದ್ಧವಾಗಿ ಬರುತ್ತಾರೆ? ಇಷ್ಟಕ್ಕೂ ನಾನೇನು ಧರ್ಮಕ್ಕೆ ಮಾಡಿದೆನೆ? ಅಲ್ಲಿ ಬರುವ ದುಡ್ಡು ಇಲ್ಲೇ ಬಂದುಹೋಯಿತು. ಗುಂಡಮ್ಮನ ವಿಶ್ವಾಸ ಅವರಿಗೂ ಗೊತ್ತಿಲ್ಲದೇ ಇಲ್ಲ. ಮದುವೆಗೆ ಬರಲಿಲ್ಲವೆಂತ ಸಿಟ್ಟಿಗೆ ಹಾಗೆ ಹೇಳಿದಾರೆ. ನೀನು ಹೇಳು, ಮನುಷ್ಯರ ವಿಶ್ವಾಸವನ್ನು ಒರೆಹಚ್ಚಿ ನೋಡುವುದು ಕಷ್ಟದಲ್ಲೋ, ಸುಖದಲ್ಲೋ? ಸಂತೋಷ ಕಾಲದಲ್ಲಿ ನಗುತ್ತ ಓಡಾಡುತ್ತ ಉಂಡು, ತಿಂದು, ಕೈಗೆಬಂದ ಕೆಲಸವನ್ನು ಮಾಡಿದರೆ ಮಾತ್ರ ವಿಶ್ವಾಸವೇ? ಅದರಿಂದ ಅವರು ವಿಶ್ವಾಸದ ಆಳವನ್ನು ಅಳೆದು, ನಾನು ದೂರವಾದೆನೆಂದು ಭಾವಿಸಿದರೆ ಅದಕ್ಕೆ ನಾನೇನು ಮಾಡಲಿ? ಅವರ ಸಂತೋಷ " ಎಂದು ಹೇಳಿ ಗುಂಡಮ್ಮ ನಕ್ಕಳು.

ಗುಂಡಮ್ಮ " ನಾನೇನು ಧರ್ಮಕ್ಕೆ ಮಾಡಿದೆನೆ? " ಎಂದು ಹೇಳಿದರೂ

ಅವಳ ಮನಸ್ಸಿನಲ್ಲಿ ದುಡ್ಡಿಗೆ ಹೆಚ್ಚು ಪ್ರಾಧಾನ್ಯವಿಲ್ಲವೆಂಬುದು ನನಗೆ ಗೊತ್ತು. ಕೈಲಿ ಒಂದು ಕಾಸೂ ಇಲ್ಲದೆ, "ನಾಳೆ"ಯ ಯೋಚನೆಯೇ ಇಲ್ಲದೆ ಅವಳಷ್ಟು ನಿರಾಶೆಯಾಗಿ, ಸುಖವಾಗಿ ಇದ್ದವರನ್ನು ನಾನು ಇದು ವರೆಗೂ ನೋಡಿಲ್ಲ. ಪ್ರಪಂಚದಲ್ಲಿ ಅನುಭವಿಸುವ ಅನೇಕ ಸುಖಗಳಿಗೆ ಆವಶ್ಯಕವಾದ ದುಡ್ಡಿನ ವಿಚಾರದಲ್ಲಿ ಆತಂಕವಿಲ್ಲದೆ, ಶ್ರದ್ಧೆಯಿಲ್ಲದೆ, ಅವಳಂತೆ ಇರುವವರೂ ಬಹಳ ವಿರಳವೇ! ಅವಳ ಸ್ವಭಾವ ಸಾಮಾನ್ಯವಾದ ಇತರ ಜನಗಳಿಗಿಂತ ವಿಚಿತ್ರವಾಗಿತ್ತು. ಅವಳು ಮಾಡಿದ ಶ್ರಮಕ್ಕಾಗಿ ಯಾರಾ ದರೂ ದುಡ್ಡು ಕೊಟ್ಟರೆ ಸ್ವಲ್ಪವೂ ಸಂಕೋಚದ ಸೋಂಕಿಲ್ಲದೆ ತೆಗೆದುಕೊಳ್ಳು ತ್ತಿದ್ದಳು. ಕೊಡದಿದ್ದರೆ ಅದರ ಯೋಚನೆಯನ್ನೇ ಮಾಡುತ್ತಿರಲಿಲ್ಲ. ತಾನು ಮಾಡಬೇಕಾದ ಕೆಲಸವನ್ನು ಮಾಡಿದ್ದಾಯಿತೆಂದು ತಿಳಿದುಕೊಂಡು ಸುಮ್ಮನಿದ್ದು ಬಿಡುತ್ತಿದ್ದಳು.

"ಗುಂಡಮ್ಮ ಯಾವಾಗಲೂ ಹೀಗಿರಲಿಲ್ಲ. ಒಂದಾನೊಂದು ಕಾಲದಲ್ಲಿ ಇತರರು ಒಂದು ಆಣೆ ತೆಗೆದುಕೊಳ್ಳುವ ಜಾಗದಲ್ಲಿ ನಾಲ್ಕು ಆಣೆ ತೆಗೆದು ಕೊಳ್ಳುತ್ತಿದ್ದಳು. ಈ ವೈರಾಗ್ಯವೆಲ್ಲಾ ಹೊಸದಾಗಿ ಬಂದದ್ದು" ಎಂದು ಕೆಲವರು ಹೇಳುವರು, ಅಂದರೆ ಗುಂಡಮ್ಮನನ್ನು ನನಗಿಂತ ಮೊದಲಿನಿಂದ ಕಂಡವರು, ಹೇಳುತ್ತಾರೆ. ಅದೂ ನಿಜವಿರಬಹುದು. ಮತ್ತು ಅದಕ್ಕೆ ತಕ್ಕ ಕಾರಣವೂ ಇದ್ದಿರಬಹುದು. ಅದನ್ನು ಹೇಳಬೇಕಾದರೆ ಗುಂಡಮ್ಮನ ಹಿಂದಿನ ವಿಚಾರವನ್ನು ಸ್ವಲ್ಪ ಹೇಳಬೇಕಾಗುತ್ತದೆ.

* * * *

ಗುಂಡಮ್ಮ, ಅವಳ ತಾಯಿತಂದೆಗಳಿಗೆ ಒಬ್ಬಳೇ ಮಗಳು. ಅವರು ಶ್ರೀಮಂತರಲ್ಲದಿದ್ದರೂ ಹೊಟ್ಟೆಬಟ್ಟೆಗಳ ಮಟ್ಟಿಗೆ ಅನುಕೂಲವಾಗಿಯೇ ಇದ್ದರು. ಗುಂಡಮ್ಮನ ಬಾಲ್ಯವು ಬಹಳ ಸುಖವಾಗಿ ಕಳೆಯಿತು. ಜೊತೆಗೆ ಬೇರೆ ಒಬ್ಬರಿಲ್ಲದೆ ಮನೆಗೆ ಒಬ್ಬಳಾಗಿಯೇ ಬೆಳೆದ ಅವಳಿಗೆ ಮುಂದಿನ ಸುಖದ ಕಲ್ಪನೆಯನ್ನು ಹೆಣೆಯುವುದರಲ್ಲಿಯೇ ಹೆಚ್ಚು ಹೊತ್ತು ಕಳೆಯುತ್ತಿತ್ತು. (ಆಗ ಈಗಿನಂತೆ ಶಾಲೆ-ಕಾಲೇಜುಗಳ ಕಾಲವಲ್ಲವೆಂಬುದನ್ನು ನಾವು ಮರೆಯು ವಂತಿಲ್ಲ.) ಗುಂಡಮ್ಮನಿಗೆ ಮದುವೆಯಾದಾಗ ೧೨ ವರ್ಷ. ಹುಡುಗ ಅದೇ

ಊರಿನವನಾದರೂ, ನೆರೆಯೂರಿನಲ್ಲಿ ತನ್ನ ಸೋದರಮಾವನ ಮನೆಯಲ್ಲಿರುತ್ತಿದ್ದ. ಅವನು ಊರಿಗೆ ಬಂದಾಗ ಅವಳಿಗೆ ಹಬ್ಬ! ಜೊತೆಯವರಿಲ್ಲದೆ ಬಳಲುತ್ತಿದ್ದ ಚೇತನವು ನವಚೈತನ್ಯದಿಂದ ಮಿಡಿಯುತ್ತಿತ್ತು. ಆ ವರ್ಷ ಅವಳಿಗೆ ಒಬ್ಬ ತಮ್ಮನೂ ಹುಟ್ಟಿದ. ಗುಂಡಮ್ಮನ ಸಂತೋಷಕ್ಕೆ ಪಾರವೇ ಇಲ್ಲ. ತಾಯಿ-ತಂದೆಗಳಿಗೂ ಹಾಗೆಯೇ. ಮಗಳು ಗಂಡನ ಚಿಂತೆಗೆ ಗುರಿಯಾಗುವ ವೇಳೆಗೆ ಮಗ ಹುಟ್ಟಿದ್ದು ಸಂತೋಷವೇ! ಆದರೆ ಆ ಸಂತೋಷ ಕುಡಿಯಿಡುತ್ತಿರುವಾಗಲೇ ಗುಂಡಮ್ಮನ ಗಂಡ ತೀರಿಹೋದ ವರ್ತಮಾನವು ಸಿಡಿಲಿನಂತೆ ಬಂದು ಅದು ಮೊಳಕೆಯಲ್ಲಿಯೇ ಸೀದುಹೋಯಿತು.

ಗುಂಡಮ್ಮನಿಗೆ ತನ್ನ ಸ್ಥಿತಿಯನ್ನು ಪೂರ್ಣವಾಗಿ ಅರಿಯುವಷ್ಟು ಪ್ರಪಂಚಜ್ಞಾನ ಬಂದಿರಲಿಲ್ಲ. ಅವಳಿಗೆ ಆಗಾಗ ದುಃಖವಾಗುತ್ತಿದ್ದರೂ, ಮನೆಯಲ್ಲಿ ಅಂಬೆಗಾಲಿಕ್ಕುತ್ತಿದ್ದ ಮಗು ಬೇಗ ಅದನ್ನು ಮರೆಸಿಬಿಡುತ್ತಿತ್ತು. ಹೀಗೆ ಐದಾರು ವರ್ಷಗಳು ಕಳೆದಿರಬಹುದು. ಆಗ ಗುಂಡಮ್ಮನ ತಾಯಿ-ತಂದೆಗಳು ಜೀವನ ಸಾಗರದಲ್ಲಿ ಅವಳನ್ನು ಆ ಮಗುವಿನೊಂದಿಗೆ ತೇಲಿಬಿಟ್ಟು ತಾವು ಕಣ್ಮರೆಯಾದರು.

ಗುಂಡಮ್ಮ ನಿಜವಾಗಿ ಕಣ್ಣು ತೆರೆದದ್ದು ಆಗ. ಕಷ್ಟದಲ್ಲಿ ಮುಳುಗಿದ್ದರೂ, ಅದರ ಕಾವು ತಗಲಿದ್ದೂ ಆಗಲೇ! ಊರು ತುಂಬ ಕಂಡ ಜನಗಳೇ; ಮನೆಯಲ್ಲಿ ತಿನ್ನುವುದಕ್ಕೆ ಇರದಿದ್ದರೂ, ಕಂಡವರ ಮನೆಗೆ ಹೋಗುವುದು ಅವಮಾನ. ಬದುಕಿ ಬಾಳಿದ ಊರಿನಲ್ಲಿ ಭಿಕ್ಷೆಬೇಡುವುದೇ? ಇಂಥಾ ಕಷ್ಟವೇ ಅವಳಿಗೆ ಎದೆಗಾರಿಕೆಯನ್ನು ಕೊಟ್ಟಿರಬೇಕು! ಅವಳು ಒಬ್ಬಳೇ ಆಗಿದ್ದರೆ ಅದರ ಮಾತೇ ಬೇರೆ. ಜೊತೆಗೆ ಹುಡುಗ ಬೇರೆ. ಅವನನ್ನು ದೊಡ್ಡವನನ್ನಾಗಿ ಮಾಡುವ ಭಾರವನ್ನು ತಾಯಿ-ತಂದೆಗಳು ಹೊರಿಸಿ ಹೊರಟುಹೋಗಿದ್ದಾರೆ. ಪ್ರಪಂಚವನ್ನು ಕಾಣದ ಹುಡುಗಿ ಬರಿಯ ಕೈಲಿ ಮೈಸೂರಿಗೆ ಬಂದು ತಮ್ಮನನ್ನು ಮುಂದಕ್ಕೆ ತರುವ ಭಾರವನ್ನು ಹೊತ್ತು ಸ್ವಾರ್ಥವನ್ನೆಲ್ಲಾ ಮರೆತು ತನ್ನ ಮೇಲೆ ಬಿದ್ದ ಜವಾಬ್ದಾರಿಯನ್ನು ನಿರ್ವಹಿಸಲು ನಿಂತಳು. ಆ ವರ್ಷಗಳಲ್ಲಿ ಅವಳು ಪಡೆದ ಜೀವನದ ಕಟುತರವಾದ ಅನುಭವವೇ ಈಗ ನಾವು ಅವಳಲ್ಲಿ ನೋಡುತ್ತಿರುವ ತಾಳ್ಮೆ, ಯಾವಾಗಲೂ ಮಾಸದ ನಗು,

ಇಷ್ಟುಗಳಿಗೆ ಕಾರಣವಾಗಿರಬೇಕು. ಆ ವಿಚಾರವಾಗಿ ಮಾತುಬಂದಾಗ ಗುಂಡಮ್ಮ ಒಂದು ದಿನ, "ನೋಡು, ಆ ಮೊದಲಿನ ದಿನಗಳನ್ನು ನೆನೆಯು ಬಾರದು. ಹತ್ತು ಮನೆಗೆ ಕೆಲಸಕ್ಕಾಗಿ ತಿರುಗುತ್ತಿದ್ದೆ. ಒಬ್ಬೊಬ್ಬರ ಸ್ವಭಾವ ಒಂದೊಂದು ರೀತಿ. ಬರಬರುತ್ತ ನನಗೆ ದೂಷಣೆಗೂ ಹೊಗಳಿಕೆಗೂ ವ್ಯತ್ಯಾಸವೇ ಕಾಣುತ್ತಿರಲಿಲ್ಲ. ಕೆಲಸವೊಂದೇ ನನ್ನ ಗುರಿ! ಎಷ್ಟು ಕಷ್ಟಪಟ್ಟಿದ್ದರೂ ಮನೆಗೆ ಬಂದು ಅವನನ್ನು ನೋಡಿದ ಕೂಡಲೇ ಎಲ್ಲವೂ ಮರೆತು ಹೋಗುತ್ತಿತ್ತು. ನನಗೆ ಪ್ರಪಂಚವೆಂದರೆ ಅವನೇ ಆಗಿದ್ದ. ಎಷ್ಟೋ ಸಲ ಮೂರು ಮೂರುದಿನ ಊಟವಿಲ್ಲದೆ, ಅವನ ಮಟ್ಟಿಗೆ ತಿಂಡಿ ತರಲು ಸಾಧ್ಯವಾಗುತ್ತಿತ್ತು. ಆದರೆ ಕಾಲವು ಎಂದಿಗೂ ಒಂದೇ ಸಮನಾಗಿರುವುದಿಲ್ಲ. ನನಗೂ ಹೆಚ್ಚು ಜನಗಳ ಪರಿಚಯವಾಯಿತು ನನಗೆ ನನ್ನ ರಟ್ಟೆಯೇ ದಿಕ್ಕಾಯಿತು. ಕೂಲಿ ನಾಲಿ ಮಾಡಿ ಅದರಲ್ಲೇ ಹೊಟ್ಟೆ, ಬಟ್ಟೆ, ಅವನಿಗೆ ವಿದ್ಯೆ, ಬುದ್ಧಿ, ಮುಂಜಿ, ಮದುವೆ ಎಲ್ಲಾ ಮಾಡಿ ಆಯಿತು. ಒಂದು ದಿವಸವೂ ಕಷ್ಟ ಕಾಣಲಿಲ್ಲ ಅದು ಏನು ಉತ್ಸಾಹವೋ ಕೆಲಸ ಮಾಡುವುದಕ್ಕೆ! ಎಷ್ಟು ಸಂಪಾದಿಸಿದರೂ ಸಾಲದು. ಅವನಿಗಾಗಿ ನನ್ನ ಜೀವವನ್ನೇ ಕೊಟ್ಟರೂ ತೃಪ್ತಿಯಾಗದು.. ಅವನೂ ಹಾಗೇ ಇದ್ದ. ಬಹಳ ಒಳ್ಳೆ ಹುಡುಗ, ಒಂದು ದಿವಸ ಮಾತ್ರ—ಅದೂ ಸಹವಾಸದೋಷ ಅನ್ನಿ! ನಾನು ಪುಸ್ತಕಕ್ಕೆಂದು ಕೊಟ್ಟ ದುಡ್ಡಿನಲ್ಲಿ ಹೋಟಲಿಗೆ ಹೋಗಿ ತಿಂಡಿ ತಿಂದು, ನಾಟಕ ನೋಡಿ, ಪುಸ್ತಕವಿಲ್ಲದೆ ಕ್ಲಾಸಿನಲ್ಲಿ ಹಿಂದಾದನಂತೆ. ಆ ವಿಚಾರ ನನಗೆ ತಿಳಿದಾಗ ಎಷ್ಟು ದುಃಖವಾಯಿತು, ಗೊತ್ತೇ? ಅವನನ್ನು 'ಹೀಗೆ ಏಕೆಮಾಡಿದೆ?' ಎಂದು ಕೇಳುವುದಕ್ಕೆ ಕೂಡ ನನ್ನಲ್ಲಿ ಶಕ್ತಿ ಉಳಿಯಲಿಲ್ಲ. ನಾನು ಕಟ್ಟಿದ್ದ ಆದರ್ಶದ ಚಿತ್ರವೆಲ್ಲಾ ಒಂದೇ ಸಲಕ್ಕೆ ಚೂರುಚೂರಾಗಿ ಬಿದ್ದುಹೋಯಿತು. ಮೂರು ದಿವಸ ಒಂದೇಸಮ ಅನ್ನ ನೀರಿಲ್ಲದೆ—ಕೆಲಸಕ್ಕೂ ಹೋಗದೆ ಸಂಕಟ ಪಟ್ಟೆ. ಕೊನೆಗೆ ಆ ಹುಡುಗ ನನ್ನ ಸಂಕಟವನ್ನು ನೋಡಿ ಅಳುತ್ತಾ, 'ಅಕ್ಕಾ, ನಾನು ಮಾಡಿದ್ದು ತಪ್ಪು, ಇದೇ ಮೊದಲು, ಇದೇ ಕೊನೆ—ಇನ್ನು ಮುಂದೆ ಹೀಗೆಂದಿಗೂ ಮಾಡುವುದಿಲ್ಲ' ಎಂದು ಹೇಳಿದ. ಅಲ್ಲ ಏನು ಹುಚ್ಚು! ನಾನು ಅವನಿಗಾಗಿ ಕಷ್ಟಪಡುತೀನಿ ಅಂತ, ನವಚೈತನ್ಯದಿಂದ ತುಂಬಿದ

ಒಂದು ಜೀವ ನನ್ನ ಇಷ್ಟದಂತೆಯೇ ನಡೆಯಬೇಕೆಂದು ಬಯಸುವುದು ಯಾವ ನ್ಯಾಯ? ಆಗ ಸಂಕಟಪಟ್ಟಿದ್ದು ನೆನೆದರೆ ಈಗ ನನಗೇ ನಗು ಬರುತ್ತೆ. ನನ್ನ ಜೀವನವೆಲ್ಲಾ ಹುಚ್ಚು ಹುಚ್ಚೇ ಅನ್ನು. ಆಗ ಅವನೇ ಪ್ರಪಂಚವೆಲ್ಲಾ ಆಗಿದ್ದ. ಈಗ ಅವನು ದೂರವಾದ ಮೇಲೆ ಪ್ರಪಂಚವೆಲ್ಲಾ ನನ್ನದೆ ಆಗಿದೆ” ಎಂದಳು.

“ಅವನಿಗಾಗಿ ಇಲ್ಲಿ ಇದ್ದು ಹಲುಬುತ್ತೀರಿ. ಅವನ ಬಳಿ ಹೋಗಿ ಇರಬಾರದೆ? ಸಂಪಾದಿಸುವ ಕಾಲದಲ್ಲಿ ನೀವು ಹೋದರೆ ಅನ್ನ ಹಾಕಲಾರನೆ? ಒಳ್ಳೆಯವನು ಎಂದು ಹೊಗಳುತ್ತೀರಿ. ಮುಪ್ಪಿನ ಕಾಲದಲ್ಲಿ ನಾಲ್ಕು ದಿವಸ ನಾರಾಯಣ, ಕೃಷ್ಣ ಎನ್ನುತ್ತಾ ಇದ್ದುಕೊಂಡಿರದೆ ಈ ಕಷ್ಟ ಎಲ್ಲಿಯವರೆಗೆ ಗುಂಡಮ್ಮ?” ಎಂದು ಕೇಳಿದೆ.

“ಕಷ್ಟವೇನು ಬಂತು? ನಿಮಗೆ ಹಾಗೆ ತೋರುತ್ತೆ. ಅವನೇನೋ ಕರೆಯುತ್ತಲೆ ಇದಾನೆ. ‘ಬಾ, ಅಕ್ಕ ನಾವು ಕುಡಿದ ಗಂಜಿ ನಿನಗೂ ಹಾಕುತ್ತೇವೆ, ನೀನು ನಮಗೆ ಭಾರವೇ’ ಎನ್ನುತ್ತಾನೆ. ನನಗೇ ಹೋಗಲು ಇಷ್ಟವಿಲ್ಲ. ಅವನಿಗೆ ಕೆಲಸವಾಗಿ ಬೇರೆ ಸಂಸಾರ ಹೂಡಿದಾಗ ನನಗೆ ಒಂದೇ ಸಲಕ್ಕೆ ಮುಪ್ಪು ಬಂದಂತಾಯಿತು. ಯಾತಕ್ಕೂ ಕೆಲಸಕ್ಕೆ ಬಾರದಂತೆ ತೋರಿತು ನನ್ನ ಜೀವ. ಇಷ್ಟು ದಿನವೂ ಕಷ್ಟಪಟ್ಟಾಯಿತು. ಈಗ ಒಂದು ತುತ್ತು ಅನ್ನಕ್ಕಾಗಿ ಮತ್ತೊಬ್ಬರ ಆಶ್ರಯದಲ್ಲಿರಲೇ? ಅಂತಹ ಹೋಗಲೇ ಬೇಕಾದ ಕಾಲ ಬಂದಾಗ ಹೋದವರಾಯಿತು ಎಂದುಕೊಂಡೆ. ಈಗ ನನಗೇನು ಆಗಬೇಕಾಗಿದೆ? ಎಲ್ಲಿದ್ದರೆ ಅಲ್ಲೇ ಮನೆ. ಆ ಗುಡಿಸಲಿಗೆ ಒಂದು ರೂಪಾಯಿ ಕೊಡುವುದೂ ದಂಡವೇ. ಏನೋ ಕೈಕಾಲು ಗಟ್ಟಿಯಾಗಿರುವವರೆಗೂ ಸರಿ. ಒಂದು ತಲೆನೋವು ಮೂಗುನೋವು ಬಂದರೆ ಕಾಲುನೀಡಿಕೊಂಡು ಇನ್ನೊಬ್ಬರಿಗೆ ಮುಜಗರವಾಗದಂತೆ ಮಲಗಿಕೊಳ್ಳುವುದಕ್ಕೆ ಇರಲಿ ಎಂದು ಅದನ್ನು ಇಟ್ಟುಕೊಂಡಿದ್ದೇನೆ ಅಷ್ಟೆ” ಎಂದು ಹೇಳಿದಳು. ಆಕೆ ಆಡುತ್ತಿದ್ದ ಒಂದೊಂದು ಮಾತೂ ಒಂದೊಂದು ಅನುಭವದ ಮುದ್ದೆಯಂತೆ. “ಅವಳು ಯಾವುದಕ್ಕೂ ವ್ಯಸನಪಡದವಳಂತೆ ಹಗುರವಾಗಿ ಮಾತಾಡುತ್ತಿದ್ದರೂ, ಅವಳ ಮನಸ್ಸಿನಲ್ಲಿ ವ್ಯಥೆಯಿಲ್ಲವೇ? ಈ ಸ್ನೇಹಶೂನ್ಯ ಜೀವನದಲ್ಲಿ ಬೇಸರವಿಲ್ಲವೇ?” ಎಂಬ ಪ್ರಶ್ನೆ ಆಗಾಗ ನನಗೆ ಬರುತ್ತಿತ್ತು.

ನಾನು ನೋಡುವಾಗ್ಗೆ ಆಕೆಗೆ ವಯಸ್ಸು ಐವತ್ತರ ಮೇಲಾಗಿತ್ತು. ಅವಳನ್ನು ಬಹುವಚನದಲ್ಲಿ ಮಾತಾಡಿಸಿದರೆ ಆಕೆಗೆ ಸಿಟ್ಟು ಬರುತ್ತಿತ್ತು ನೀವು ದೊಡ್ಡವರು, ನಿಮ್ಮನ್ನು ಹೇಗೆ ಬಾ, ಹೋಗು, ಎನ್ನುವುದು?" ಎಂದು ಕೇಳಿದರೆ, "ನಿಮ್ಮ ಅಜ್ಜ ಎಷ್ಟು ದೊಡ್ಡವರು? ಅವರನ್ನು ಬಾ ಎನ್ನುವುದಿಲ್ಲವೆ? ನನ್ನನ್ನು ಏಕೆ ಹಾಗೇ ತಿಳಿದುಕೊಳ್ಳಬಾರದು! ನೀನಾದರೂ ಹಾಗೆ ಕರೆದರೆ ನನಗೆ ಸಮಾಧಾನವಾಗುತ್ತೆ" ಎಂದು ಹೇಳುತ್ತಿದ್ದಳು. ಆಗ ನನಗೆ ಏನು ಹೇಳುವುದಕ್ಕೂ ತೋರುತ್ತಿರಲಿಲ್ಲ. ಆಕೆ ಅನೇಕಸಲ ಆ ಮಾತನ್ನು ಒತ್ತಿ ಹೇಳಿದ್ದರ ಮೇಲೆ, ಈಗೀಗ ಸ್ವಲ್ಪ ಪ್ರಯತ್ನಪಟ್ಟರೂ ಪೂರ್ತಿಯಾಗಿ ಬಹುವಚನ ಪ್ರಯೋಗಹೋಗಿಲ್ಲ.

* * * *

ಒಂದು ದಿನ ಸಾಯಂಕಾಲವಾಗಿತ್ತು. ನಾನು ಏನೋ ಕೆಲಸಮಾಡುತ್ತಿದ್ದೆ. ಆಗ ಗುಂಡಮ್ಮ ಬಂದು ಕೂಗಿದಳು. ಅವಳ ಮುಖ ಪೆಚ್ಚಾಗಿತ್ತು. "ಏನು ಗುಂಡಮ್ಮ?" ಎಂದು ಕೇಳಿದೆ.

"ಏನೂ ಇಲ್ಲ, ಇಲ್ಲೇ ನಾಗಮ್ಮನ ಮನೆಗೆ ಬಂದಿದ್ದೆ ಹಾಗೆ ನೋಡಿಕೊಂಡು ಹೋಗೋಣವೆಂದು ಬಂದೆ."

"ಹೌದು; ನಾಗಮ್ಮ, 'ಗುಂಡಮ್ಮ ಯಾಕೋ ಬರಲೇ ಇಲ್ಲ. ಅವತ್ತು ಅವಸರದಲ್ಲಿ ಹೊರಟುಹೋದರು ಬಾಗಿನ ಸಹ ಕೊಟ್ಟಿಲ್ಲ ಜೋರನ ಸಂಗಡ ಹೇಳಿ ಕಳುಹಿಸಬೇಕು' ಎಂದಿದ್ದಳು.'

"ಬಾಗಿನ ಎಲ್ಲಿ ಹೋಗುತ್ತೆ ಹೇಳು! ಇನ್ನೆಂಟು ದಿನವಾದರೂ ನಾನು ಹೋದದಿನ ಬರುತ್ತಿತ್ತು. ನೀನು ಆ ಸಲ ಮಗುವಿನ ಹುಟ್ಟಿದಹಬ್ಬ ಮಾಡಿದಾಗ ಒಂದು ತಿಂಗಳಾದ ಮೇಲೆ ನಾನು ಊರಿಂದ ಬಂದಾಗ ಮಡಿಯಲ್ಲಿ ಮುಚ್ಚಿಟ್ಟಿದ್ದು ಕೊಡಲಿಲ್ಲವೇ? ಲಾಡು ಸ್ವಲ್ಪ ವಾಸನೆಬಂದಿತ್ತು. ಆದರೂ ನೀನು ಅಷ್ಟು ವಿಶ್ವಾಸದಿಂದ ಇಟ್ಟಿದ್ದೆಯಲ್ಲ ಎಂದು ಒಂದು ಕಾಳೂ ಬಿಡದೆ ತಿಂದೆ. ಮುಖ್ಯ, ವಿಶ್ವಾಸ ಎಲ್ಲಕ್ಕಿಂತ ದೊಡ್ಡದು...."

"ಕೂತುಕೊಳ್ಳಿ ಗುಂಡಮ್ಮ, ನಿಂತೇ ಇದ್ದೀರಲ್ಲ. ನಾಗಮ್ಮ ಜಾಣೆ,

ಚಿಕ್ಕವಳಾದರೂ ತುಂಬಾ ತಿಳಿವಳಿಕೆ. ಅವತ್ತು ಬಹಳ ವಿತರಣೆಯಾಗಿ ಮಾಡಿದಳು.”

“ಹೌದು, ನಾನೂ ಅವಳಿಗೆ ಹಾಗೇ ಹೇಳಿದೆ. ಇಷ್ಟಾದರೂ ಅವಳ ಮನಸ್ಸಿಗೆ ಸಮಾಧಾನವಿಲ್ಲ. ಸಂಸಾರ ಎಂದ ಮೇಲೆ ಏನಾದರೂ ಇರುತ್ತಲ್ಲ. ‘ನಮಗೆಲ್ಲ ಏನು ಮಾಡುವುದಕ್ಕೆ ಬರುತ್ತೆ’ ಎಂದು ಪೇಚಾಡಿದಳು.”

“ಕಾರಣ ?”

“ಅವತ್ತು ಸುಣ್ಣವೋ ಏನೋ ಸಿಕ್ಕಲಿಲ್ಲವಂತೆ. ‘ಏನು ಅಣಿಮಾಡಿದೀಯೋ ಒಂದಿಷ್ಟು ಸುಣ್ಣಕ್ಕೆ ಗತಿಯಿಲ್ಲ ಈ ಮನೆಯಲ್ಲಿ’ ಎಂದು ಅವಳ ಯಜಮಾನರು ಕೂಗಾಡಿದರು. ಪಾಪ, ಹುಡುಗಿ ಒಬ್ಬಳೇ ಬಹಳ ಉತ್ಸಾಹದಿಂದ ಒಂದು ತಿಂಗಳಿಂದ ಇದಕ್ಕೆ ಸಿದ್ಧಮಾಡಿದ್ದಳು. ಒಂದು ಮಡಕೆಯ ತುಂಬ ಕೆನೆಯ ಹಾಗಿದ್ದ ಸುಣ್ಣ ಸೋಸಿ ತುಂಬಿಟ್ಟಿದ್ದಳು. ಪಾಪ, ಅವಳೇ ಎಲ್ಲಕ್ಕೂ ಓಡಾಡಬೇಕು. ಕೊಡುವುದು ಸ್ವಲ್ಪ ತಡವಾಯಿತು. ಗಂಡಸರು ಅಷ್ಟೆಲ್ಲಾ ಎಲ್ಲಿ ನೋಡುತ್ತಾರೆ ? ಬೇಗ ಕೈಗೆ ಸಿಕ್ಕಲಿಲ್ಲವೆಂದು ಹಾಗಂದಿರಬಹುದು. ಅಷ್ಟು ಜನರ ಎದುರಿಗೆ ಹಾಗಂದುಬಿಟ್ಟರಲ್ಲ ಎಂದು ಅವಳಿಗೆ ! ನಾನೂ ಎಷ್ಟೋ ಸಮಾಧಾನ ಹೇಳಿದೆ. ‘ನಿನಗೆ ಆ ಮಾತಿನಿಂದ ನೋವಾಗಿದೆ ಎಂದು ತಿಳಿದರೆ ನಿನ್ನ ಯಜಮಾನರು ಇನ್ನೂ ಹೆಚ್ಚು ಆದರಿಸಿ ಸಮಾಧಾನ ಮಾಡುತ್ತಾರೆ. ಹಾಗೆ ಅಂದಮಾತ್ರಕ್ಕೆ ಅವಮಾನವೇನು ಹೇಳು. ಏನೋ ಸಿಟ್ಟಿನ ಭರದಲ್ಲಿ ಆಡಿದ ಮಾತು’ ಎಂದೆ. ಪ್ರೀತಿಯಿಂದ ಸಮಾಧಾನ ಮಾಡುವವರೊಬ್ಬರಿದ್ದರೆ, ಅನ್ನಿಸಿಕೊಳ್ಳುವುದೂ ಒಂದು ತರಹ ಸುಖವೇ ಅಲ್ಲವೇ ?” ಎಂದು ನನ್ನ ಕೇಳಿದಳು. ನಾನು ಆ ಮಾತಿಗೆ ಏನು ಹೇಳಲಿ ? “ಇರಬಹುದು” ಎಂದೆ.

ಎಂದೂ ಇಲ್ಲದ ಗುಂಡಮ್ಮ ಆ ಮಾತು ಹೇಳುತ್ತ ಕಣ್ಣೀರು ತುಂಬಿದುದನ್ನು ನೋಡಿ ನನಗೆ ಹೇಗೆಹೇಗೋ ಆಯಿತು. “ಗುಂಡಮ್ಮ, ಇವತ್ತು ಯಾಕೋ ನಿಮ್ಮ ಮನಸ್ಸು ಸರಿಯಾಗಿರುವಂತಿಲ್ಲ. ನಿಮ್ಮ ತಮ್ಮ ಹುಷಾರಾಗಿದ್ದಾನೋ ಇಲ್ಲವೋ ? ಏನಾದರೂ ಕಾಗದ ಬಂತೆ ?” ಎಂದು ಕೇಳಿದೆ.

“ನೋಡಿದೆಯಾ, ಬುಡಕ್ಕೇ ಕೊಡಲಿ ಹಾಕಿದೆ. ಬುದ್ಧಿವಂತರ

ಲಕ್ಷಣವೇ ಹೀಗೆ. ಈಗ ಮೂರು ದಿನದಲ್ಲಿ ಶೀನು ಬಂದಿದ್ದನಂತೆ. ಒಂದು ದಿನ ಅವರ ಮಾವನ ಮನೆಯಲ್ಲಿ ಇದ್ದು ಹೊರಟುಹೋದನಂತೆ. ಊರಿಗೆ ಹೋದ ಮೇಲೆ, 'ನನಗೆ ನಿನ್ನನ್ನು ನೋಡಬೇಕೆಂದು ಬಹಳ ಆಸೆಯಿತ್ತು. ಒಂದು ಘಳಿಗೆಯೂ ಪುರುಸೊತ್ತಾಗಲಿಲ್ಲ, ಬರಲಿಲ್ಲವೆಂದು ಏನೂ ತಿಳಿದುಕೊಳ್ಳಬೇಡ. ಇನ್ನೊಂದುಸಲ ಬರುತ್ತೇನೆ' ಎಂದು ಕಾಗದ ಬರೆದಿದ್ದಾನೆ. ಬೆಳಗ್ಗೆ ಕಾಗದ ಬಂದಾಗಿನಿಂದಲೂ ಒಂದೂ ಬೇಡವಾಗಿದೆ. ಒಲೆಯನ್ನು ಸಹ ಹೊತ್ತಿಸಲಿಲ್ಲ. ಹೊತ್ತುಹೋದ್ದೇ ಗೊತ್ತಾಗಲಿಲ್ಲ. ಸುಮ್ಮನೆ ಹೆಂಚು, ಗಳು, ಎಣಿಸುತ್ತ ಕೂತಿದ್ದೆ. ನಾಗಮ್ಮನ ಮನೆ ಆಳು ಬಂದು ಕೂಗಿದ. ಆಗ ಎದ್ದು ಮುಖ ತೊಳೆದುಕೊಂಡು, ಒಂದು ಲೋಟ ನೀರು ಕುಡಿದವಳೆ ಈ ಕಡೆ ಬಂದುಬಿಟ್ಟೆ" ಎಂದರು.

ನನಗೆ ಆಕೆಯನ್ನು ನೋಡಿ ತುಂಬ ವ್ಯಥೆಯಾಯಿತು. ಸಮಾಧಾನಕ್ಕಾಗಿ, "ಗುಂಡಮ್ಮ ನೀವು ಎಲ್ಲರಿಗೂ ವಿವೇಕ ಹೇಳುವವರು, ಹೀಗೆ ಮಾಡಬಹುದೇ? ಏನೋ, ಏನು ಕೆಲಸವಿತ್ತೋ, ಹಾಗೇ ಹೊರಟುಹೋಗಿರಬಹುದು. ಅಷ್ಟಕ್ಕೆ ಇಷ್ಟು ನೊಂದುಕೊಳ್ಳುವುದೇ? ನೋಡಿ, ಹೋದವಾರ ನನ್ನ ತಂಗಿ ಮೋಟಾರಿನಲ್ಲಿ ಬಂದಿದ್ದಳಂತೆ; ಅಲ್ಲೇ ಯಾರೋ ಸ್ನೇಹಿತರ ಮನೆಯಲ್ಲಿ ರಾತ್ರಿ ಇದ್ದು ಬೆಳಗ್ಗೆ ಅಷ್ಟು ಹೊತ್ತಿಗೇ ಹೊರಟುಹೋದಳಂತೆ. ಆಮೇಲೆ ನನಗೆ ಗೊತ್ತಾಯಿತು. ಮೋಟಾರಿತ್ತು. ಹಾಗೇ ಒಂದುಕ್ಷಣ ಈ ಕಡೆ ಬಂದು ಇಣಿಕಿ ನೋಡಿಕೊಂಡು ಹೋಗಬಾರದಾಗಿತ್ತೆ ಎಂದು-ಕೊಂಡೆ ಅಷ್ಟೆ. ಅದನ್ನೆಲ್ಲಾ ಮನಸ್ಸಿಗೆ ಹಚ್ಚಿಕೋತಾ ಹೋದರೆ ಹೇಗಾಗುತ್ತೆ ಹೇಳಿ?"

"ಏನೋಮ್ಮ, ನೀವು ಸರಿಸರಿಯಾಗಿ ಬದುಕುವವರು, ಹಾಗೇ ಅಂದುಕೊಳ್ಳಬಹುದು. ನನಗೆ ಹಾಗನ್ನಿಸುವುದೇ? ನಾನೂ ಎಲ್ಲರಂತೆ ಇದ್ದಿದ್ದರೆ ನನ್ನ ತಮ್ಮ ಹೀಗೇಕೆ ಮಾಡುತ್ತಿದ್ದ? ಅತ್ತೆಮನೆಗೆ ಹೋದರೆ ಅಳಿಯ ಬಂದನೆಂದು ತುಂಬಾ ಉಪಚಾರಮಾಡುತ್ತಾರೆ. ನನ್ನ ಮನೇಲಿ ಏನಿದೆ? ಕಾಫಿಪುಡಿ ಸಕ್ಕರೆ ತೆಗೆದುಕೊಂಡು ಬಂದರೆ ಕಾಫಿ ಮಾಡಿ ನಿನಗೂ ಕೊಟ್ಟು ನಾನೂ ಕುಡಿಯುತ್ತೇನೆ ಎನ್ನಬೇಕಾಗಿತ್ತು. ಏನೋ ಹಾಳುಪಾಪಿ ಅಳುಕು

ಮನಸ್ಸು; ಎಷ್ಟು ಬುದ್ಧಿ ಹೇಳಿದರೂ ಅದರ ದಾರಿ ಅದು ಬಿಡುವುದಿಲ್ಲ. ಆದರೇನು? ನಾನು ಗುಂಡಲ್ಲವೇ? ಯಾವುದಕ್ಕೂ ಜಗ್ಗುವುದಿಲ್ಲ. ಅದಕ್ಕೇ ನಾನು ಆ ಹೆಸರಿಟ್ಟುಕೊಂಡದ್ದು! ಏನೋ ಹೇಳುತ್ತಾರಲ್ಲ 'ಗೋರ್ಕಲ್ಲ ಮೇಲೆ ಮಳೆಗರೆದರೆ' ಅಂತ, ಹಾಗೆ! ಕಷ್ಟಸುಖ ಯಾವುದು ಬಂದರೂ ಬಹಳ ಹೊತ್ತು ನಿಲ್ಲುವುದಿಲ್ಲ. ಕಲ್ಲಿನ ಮೇಲೆ ಬಿದ್ದ ನೀರಿನ ಹಾಗೆ! ಒಂದುಕ್ಷಣ ನೆನಸಿ ಕೊಚ್ಚಿಹೋಗುತ್ತದೆ. ಅಷ್ಟೆ! ನಾಳೆ ಇಷ್ಟು ಹೊತ್ತಿಗೆ ನನ್ನ ಸಮಾನ ವಿಲ್ಲವೆಂದು ಹಪ್ಪಳವೋ, ಸಂಡಿಗೆಯೋ ಮಾಡುತ್ತ ಸಮಾಧಾನವಾಗಿದ್ದು ಬಿಡುತ್ತೇನೆ" ಎಂದು ಹೇಳಿ ಕಣ್ಣೊರಸಿಕೊಂಡಳು.

ಗುಂಡಮ್ಮ ಹೆಸರು ಬದಲಾಯಿಸಿಕೊಂಡ ವಿಚಾರ ನನಗೆ ಗೊತ್ತಿತ್ತು. ಅವಳ ಹೆಸರು 'ಅರವಿಂದ' ಗುಂಡಮ್ಮ ಕುರೂಪಿಯೇನಲ್ಲ. ಈ ವಯಸ್ಸಿನಲ್ಲಿ ಇಷ್ಟು ತಾಪತ್ರಯಗಳಲ್ಲಿ ಇರುವಾಗಲೇ ತಕ್ಕಮಟ್ಟಿಗೆ ನೋಡಲು ಚೆನ್ನಾಗಿದ್ದಾಳೆ. ಚಿಕ್ಕತನದಲ್ಲಿ ಇನ್ನೂ ಲಕ್ಷಣವಾಗಿದ್ದಳೆಂದು ಅವಳನ್ನು ಈಗ ನೋಡುವ ಯಾರಾದರೂ ಸುಲಭವಾಗಿ ಊಹಿಸಬಹುದು. ತಾಯಿ-ತಂದೆಗಳು ತಮ್ಮ ಒಂದೇ ಮಗುವನ್ನು ಮುದ್ದಿನಿಂದ 'ಅರವಿಂದ' ಎಂದು ಕೂಗುತ್ತಿದ್ದರು. ಅವಳು ಮೈಸೂರಿಗೆ ಬಂದ ತರುಣದಲ್ಲಿ ಯಾರೋ ಅವಳನ್ನು "ಮಾಡುವುದು ಕೂಲಿ, ಹೆಸರು ಮಾತ್ರ 'ಅರವಿಂದ'" ಎಂದು ಆಡಿಕೊಂಡರಂತೆ. ಅದು ಅವಳ ಕಿವಿಗೂ ಬಿದ್ದಿತು. ಗುಂಡಮ್ಮ ಅವರ ಮೇಲೆ ಕೋಪಿಸಿಕೊಳ್ಳಲಿಲ್ಲ, 'ಅದೂ ನ್ಯಾಯವೇ' ಎಂದುಕೊಂಡಳು. ಚೆನ್ನಾಗಿರುವ ಹೆಸರು, ಕೂಲಿ ಕೆಲಸ, ಎರಡೂ ಜೊತೆಯಲ್ಲಿ ಶೋಭಿಸುವುದಿಲ್ಲ. ಯಾವುದನ್ನಾದರೂ ಒಂದನ್ನು ಬಿಡಬೇಕು. ಗುಂಡಮ್ಮ ಆಗ ಇದ್ದ ಸ್ಥಿತಿಯಲ್ಲಿ ಯಾವುದನ್ನು ಬಿಡಬೇಕೆಂದು ಹೆಚ್ಚು ಯೋಚನೆಮಾಡಬೇಕಾಗಿರಲಿಲ್ಲ. ಹೆಸರು ಬದಲಾಯಿಸುವುದೇ ಸುಲಭವೆಂದುಕೊಂಡು, ಆಗಿನಿಂದ ಮುಂದೆ ತಾನು ಹೋದ ಕಡೆಯಲ್ಲೆಲ್ಲಾ 'ಗುಂಡಮ್ಮ'ನೆಂದು ಹೇಳಿಕೊಳ್ಳುತ್ತಾ ಬಂದಳಂತೆ.

ಈ ವಿಚಾರವನ್ನು ಅವಳೇ ಒಂದು ದಿನ ಏನೋ ಮಾತು ಬಂದಾಗ ಹೇಳಿದ್ದಳು. ಈಗಲೂ ಆ ಹೆಸರು ನೆನಪಾದ ಕೂಡಲೆ ಗುಂಡಮ್ಮನಿಗೆ ಹೊಸ ಶಕ್ತಿ ಬಂದಂತಾಗಿ ನಗುಮುಖದಿಂದ ಎದ್ದು, "ನಾನು ಹೋಗುತ್ತೀನಮ್ಮ, ಹೊತ್ತಾಯಿತು" ಎಂದಳು.

ನಾನು, "ಗುಂಡಮ್ಮ, ಏನಾದರೂ ಸ್ವಲ್ಪ ಫಲಾಹಾರ ಮಾಡಿಕೊಂಡು ಹೋಗಿ, ಬೆಳಗಿನಿಂದ ಊಟವಿಲ್ಲ" ಎಂದು ಹೇಳಿದೆ.

"ಏನೂ ಬೇಡಮ್ಮ, ನಾಳೆ ಊಟ ಆಗುತ್ತೆ. ಈಗ ನಾಗಮ್ಮ ಕೊಟ್ಟ ದಾಳಲ್ಲ ಅದನ್ನೇ ಅಷ್ಟು ಬಾಯಿಗೆ ಹಾಕಿಕೊಳ್ಳುತ್ತೇನೆ" ಎಂದು ಹೇಳಿ ಹೊರಟುಹೋದಳು.

ಗುಂಡಮ್ಮ ಹಾಗೇ ಕತ್ತಲೆಯಲ್ಲಿ ಮರೆಯಾದಳು. ನಾನು ಬಹಳ ಹೊತ್ತಿನವರೆಗೆ ಆ ಕಡೆಯೇ ನೋಡುತ್ತ, ಜೀವನದ ಸುಖದುಃಖಗಳ ಕುಲುಮೆಯಲ್ಲಿ ಕರಗಿ ತಿಳಿಯಾದ ಮನಸ್ಸನ್ನೂ, ಆ ಅನುಭವದ ಬೆಳಕನ್ನು ಪ್ರತಿಬಿಂಬಿಸುತ್ತಿದ್ದ ಅವಳ ಮುಖವನ್ನೂ ನೆನೆಯುತ್ತಿದ್ದೆ.

---

# ಎರಡು ಚಿತ್ರ

## ೧

ಗಂಗಾರಾಮ ತಲೆಗೆ ವಸ್ತ್ರವನ್ನು ಸುತ್ತಿಕೊಂಡು ಹೊರಗೆ ಹೊರಟ. ಎರಡು ಹೆಜ್ಜೆ ಇಡುವಷ್ಟರಲ್ಲಿ ಚೆನ್ನಿ ಒಳಗಿನಿಂದ ಮಗುವನ್ನೆತ್ತಿಕೊಂಡು ಬಂದು, ಅವನ ಭುಜವನ್ನು ಕುಲುಕಿ ನಗುತ್ತ,—

"ನಾನು ಹೇಳಿದ್ದನ್ನು ಮರೆಯುವುದಿಲ್ಲ ತಾನೆ?" ಎಂದಳು.

ಗಂಗಾರಾಮ ಹಿಂತಿರುಗಿ ನೋಡಿ ತಾನೂ ನಗುತ್ತ,—

"ಎನ್ನ ಚೆನ್ನಿ ನೆನಪಿಟ್ಟುಕೊಳ್ಳೋದು!" ಎಂದ.

"ಈಗ ಹೇಳಿದ್ದನ್ನು ಈಗಲೇ ಮರೆತುಬಿಟ್ಟರೆ, ಇನ್ನು ಎರಡು ದಿನಕ್ಕೆ ನೆನಪಿದ್ದ ಹಾಗೇ ಆಯ್ತು."

"ಹೋಗಲಿ ಚೆನ್ನಿ, ಇನ್ನೊಂದು ಸಲ ಹೇಳಿಬಿಡು. ನನಗೆ ಮರವು ಹೆಚ್ಚು....ಈ ಸಲ....ನಿನ್ನ ಕೊರಳಾಣೆಗೂ ಮರೆಯೋಲ್ಲ."

"ಅದೇ, ನಾಡಿದ್ದು ಚಾಮುಂಡಿ ಅಮ್ಮನ ಹಬ್ಬ. ಗ್ರಾಮದೇವತೆ ಉತ್ಸವ. ಎಲ್ಲರೂ ಹಬ್ಬ ಮಾಡುತ್ತಾರೆ. ಮಗುವಿಗೆ ಬಂದಿದ್ದ ಖಾಯಿಲೆಯಲ್ಲಿ ಮಾತಾಯಿ ಇಷ್ಟುಮಟ್ಟಿಗೆ ದಯಮಾಡಿದಳಲ್ಲ! ನಾವೂ ಹಬ್ಬ ಮಾಡಿ ಹರಕೆ ಸಲ್ಲಿಸಬೇಡವೆ? ನಾಳೆ ಬೆಳಗ್ಗೆಯೇ ರಜ ಕೇಳಿಕೊಂಡು ಬಂದುಬಿಡು. ಹಾಗೇ ಸಂಬಳದ ಹಣದಲ್ಲಿ ಕೊಂಚವನ್ನ ಮುಂಗಡವಾಗಿ ತಗೊಂಡು, ಬರುತ್ತಾ ಸಾಮಾನನ್ನೂ ತೆಗೆದುಕೊಂಡು ಬಾ....ಮನೆಯಲ್ಲಿ ಏನೂ....ಇಲ್ಲ" ಎಂದಳು.

ಗಂಗಾರಾಮ ಖಿನ್ನನಾಗಿ, "ಚೆನ್ನಿ, ಹಣ ಎಲ್ಲಿದೆ? ಹೋದ ತಿಂಗಳೇ ಮಗುವಿನ ಖಾಯಿಲೆಗಾಗಿಯೂ ಬಟ್ಟೆಬರೆಗೆಂದೂ ಈ ತಿಂಗಳ ಸಂಬಳವನ್ನು ಮುಂಗಡವಾಗಿ ತೆಗೆದುಕೊಂಡಿರಲಿಲ್ವಾ? ಈಗ ಪುನಃ ಕೇಳಿದರೆ ದಣಿ ಏನೆಂದಾರು!" ಎಂದನು.

ಚೆನ್ನಿ ಸುಮ್ಮನಿದ್ದಳು. ಗಂಗಾರಾಮನೇ ಪುನಃ, "ನೋಡೋಣ ಚೆನ್ನಿ. ಯೋಚ್ನೆ ಮಾಡಬೇಡ. ಈ ಸಲ ಹೇಗಾದರೂ ಮಾಡಿ ಕೊಡ್ಲೇಬೇಕೆಂದು ಕೇಳ್ಕೋತೇನೆ. ಒಂದು ವೇಳೆ ರಾಯರು ಕೊಡದಿದ್ದರೂ, ಅಮ್ಮಾವ್ರಲ್ಲಿ ಕೇಳಿಕೊಂಡ್ರೆ ಕೊಡದೆ ಇರಲಾರರು! ಚೆನ್ನಿ, ನೀನು ಎಷ್ಟೋ ಸಂತೋಷವಾಗಿ ಹಬ್ಬ ಹರಿದಿನಗಳನ್ನು ಮಾಡಿ ಹಾಯಾಗಿದ್ದವಳು. ನನ್ನಂಥವನ್ನ ಮದುವೆಯಾಗಿ ಏನು ಸುಖಪಡ್ತಿದ್ದೀಯೋ! ನಮ್ಮ ಕಷ್ಟ ದೇವರಿಗೆ ಎಂದಿಗೆ ತಿಳಿಯುತ್ತೋ?"

"ಹೋಗಲಿ ಬಿಡಬಾರ್ದ; ಇದಕ್ಕೇಕೆ ಇಷ್ಟು ಪೇಚಾಟ. ನಿನ್ನ ಮದುವೆಯಾಗಿ ಸುಖಪಡುತ್ತಿದೀನೋ, ಕಷ್ಟಪಡುತ್ತಿದೀನೋ—ಅದು ನನಗೇ ಗೊತ್ತು! ನೀನಲ್ಲ ಅದನ್ನ ಹೇಳೋದು! ಹೊತ್ತಾಗಲಿಲ್ವಾ ಕೆಲಸಕ್ಕೆ?"

ಗಂಗಾರಾಮ ಹೊರಟ. ಮಗು ಅವನನ್ನು ಹಿಡಿದು "ಅಪ್ಪಾ, ನಾನೂ ಬರುತ್ತೇನೆ" ಎಂದಿತು.

"ಬೇಡಪ್ಪ, ನಾನು ನಿಂಗೆ ಕಡಲೆಪುರಿ ತಂದು ಕೊಡ್ತೇನೆ, ಇಲ್ಲೇ ಇರು."

"ನಂಗೆ ಪುರಿ....ಬೇಡ. ನಾನು ನಿನ್ಜೊತೆ....ಉ....ಉ...."

ಮಗು ಸಣ್ಣ ರಾಗ ಎಳೆಯುತ್ತ ಬಲವಾಗಿ ಅವನ ಕಾಲು ಹಿಡಿದು ಕೊಂಡಿತು. ಗಂಗಾರಾಮ ಅದನ್ನು ಎತ್ತಿಕೊಂಡು ಸಮಾಧಾನ ಮಾಡಿ, "ನೀನು ಬಂದರೆ ರಾಯರು ಸುಮ್ಮನೆ ಬುಟ್ಟಾರ? ಅವರ ಮನೆ ಬಾಕ್ಲಲ್ಲಿ ಎಷ್ಟಪ್ಪ ಗುಮ್ಮ ಇದೆ ಅಂತೀ, ಇಷ್ಟು ದಪ್ಪ! ಮಕ್ಕಳು ಮರಿ ಹೋದರೆ 'ಗೊಳಪ್' ಅಂತ ನುಂಗೇ ಬಿಡುತ್ತೆ" ಎಂದು ಅಭಿನಯ ಸಹಿತ ತೋರಿಸುತ್ತ ಮಗುವನ್ನು ಬಲವಂತದಿಂದ ಚೆನ್ನಿಯ ಕೈಗೆ ಕೊಟ್ಟು, "ಮಗೂನ ನೋಡ್ಕೋ ಚೆನ್ನಿ, ಅಳಿಸಬೇಡ" ಎಂದು ಹೇಳಿ ಹೊರಟು ಸ್ವಲ್ಪ ದೂರ ಹೋಗುವುದರಲ್ಲಿ ಚೆನ್ನಿ ಹಿಂದಿನಿಂದ ಓಡಿಬಂದು ಪುನಃ ಅವನ ಭುಜವ ಮೇಲೆ ಕೈ ಇಟ್ಟಳು. ಗಂಗಾರಾಮ ತಿರುಗಿ ನೋಡಿ ನಗುತ್ತ, "ಇನ್ನೇನು ಚೆನ್ನಿ? ಇನ್ನೂ ನನ್ನ ಹೋಗಲು ಬಿಡಲು ಮನಸ್ಸಿಲ್ವಾ!" ಎಂದನು.

"ಮನಸ್ಸಿಲ್ಲದಿದ್ರೂ ಬಿಡಬೇಕು! ನನ್ನ ಮುಂದೆ ಕೂತಿದ್ರೆ ಹೊಟ್ಟೆ ತುಂಬಬೇಕಲ್ಲ?....ನೋಡು! ಸಮಯ ನೋಡಿ ಕೇಳು. ರಾಯರ ಹತ್ತಿರ ಸುಮ್ಮನೆ ಬೈಸಿಕೋ ಬೇಡ. ನೀನು ನಗುತ್ತ ಸಂತೋಷವಾಗಿದ್ದರೆ ಅದೇ ನನಗೆ ಹಬ್ಬ!"

ಗಂಗಾರಾಮ ಹೆಂಡತಿಯ ಕಡೆ ಅಭಿಮಾನದಿಂದ ನೋಡಿದ. ಚೆನ್ನಿ ಒಟ್ಟಿನಲ್ಲಿ ಲಕ್ಷಣವಾದ ಹುಡುಗಿ. ಕೆದರಿ, ಮುಖವನ್ನು ಮುಚ್ಚಿದ ಕೂದಲ ಸಂದಿನಿಂದ ಪ್ರೇಮವನ್ನು ಸೂಸುವ ಕಣ್ಣುಗಳೂ, ಕಾಸಿನಗಲದ ಕುಂಕುಮದ ಬಟ್ಟೂ ಕಾಣುತ್ತಿತ್ತು. ಸುತ್ತಲೂ ಹಸುರಿನಿಂದ ತುಂಬಿದ ಹೊಲಗಳು. ಬೆಳಗಿನ ತಂಗಾಳಿ. ಆಗತಾನೆ ಎದ್ದಿದ್ದ ಒಬ್ಬಿಬ್ಬರು ನೀರಿನ ಕಡೆ ಹೋಗು ತ್ತಿದ್ದರು. ಗಂಗಾರಾಮ ಎಲ್ಲವನ್ನೂ ನೋಡುತ್ತ ಮನಸ್ಸಿನಲ್ಲ, "ಕತ್ತಲಿಂದ ತುಂಬಿರುವ ಈ ಬದುಕಿನಲ್ಲಿ ಒಂದು ಬೆಳಕನ್ನಾದರೂ ನನಗೆ ಕೊಟ್ಟಿರುವ ನಲ್ಲ!" ಎಂದುಕೊಂಡು, "ಹಾಗೇ ಆಗಲಿ ಚೆನ್ನಿ!" ಎಂದು ಹೇಳಿ ಮುಂದೆ ಹೊರಟ. ಚೆನ್ನಿ ಅವನು ಹೋದ ದಾರಿಯ ಕಡೆಗೇ ನೋಡುತ್ತ ನಿಂತಿದ್ದಳು.

* * * *

ಗಂಗಾರಾಮ ಈ ಕಡೆಯವನಲ್ಲ; ಉತ್ತರಸೀಮೆಯವನು. ಆ ಸಲ ಬಂದ

ಪ್ಲೇಗಿನ ಹಾವಳಿಗೆ ಅವನ ಮನೆಯವರೆಲ್ಲ ತುತ್ತಾಗಲು, ಅಲ್ಲಿರಲು ಜುಗುಪ್ಸೆ ಹುಟ್ಟಿ ಈಕಡೆ ಬಂದಿದ್ದನು. ಅನಾಥನಾಗಿ ಬಂದ ಹುಡುಗನಿಗೆ ಗೌಡರು ತಮ್ಮ ಮನೆಯಲ್ಲಿ ಆಶ್ರಯ ಕೊಟ್ಟರು. ಸುತ್ತಮುತ್ತಲಿನ ಭೂಮಿಯೆಲ್ಲಾ ಸ್ವಲ್ಪ ಹೆಚ್ಚುಕಡಿಮೆ ಅವರಿಗೇ ಸೇರಿಹೋಗಿತ್ತು. ಹೊಸಹಳ್ಳಿಯಲ್ಲಿ ಇದ್ದ ಮುಕ್ಕಾಲು ಪಾಲು ಜನರೆಲ್ಲ ಅವರ ಒಕ್ಕಲೇ. ಎಲ್ಲರೂ ಒಂದಲ್ಲ ಒಂದು ರೀತಿ ಅವರನ್ನು ಆಶ್ರಯಿಸಿಕೊಂಡಿರುವವರೇ ಆಗಿದ್ದರು. ಗೌಡರು ಅಷ್ಟು ಅನುಕೂಲಸ್ಥರು.

ಚೆನ್ನಿ ಗೌಡರ ಕಿರಿಯ ಮಗಳು. ಬಹಳ ಅಕ್ಕರೆಯಿಂದ ಬೆಳೆಸಿದ ಹುಡುಗಿ. ಅವಳಿಗೆ ಮೊದಲಿನಿಂದಲೂ ಗಂಗಾರಾಮನಲ್ಲಿ ಬಹಳ ವಿಶ್ವಾಸ. ಗಂಗಾರಾಮನ ನಡೆನುಡಿಗಳು, ಉಡಿಗೆತೊಡಿಗೆಗಳು ಅವಳು ನೋಡಿದ್ದ ಇತರ ಜನಗಳಿಗಿಂತ ಬೇರೆಯಾಗಿರುತ್ತ ಹೆಚ್ಚು ನಾಗರಿಕವಾಗಿದ್ದುವು. ಗಂಗಾರಾಮ ನೋಡುವುದಕ್ಕೂ ಚೆನ್ನಾಗಿದ್ದ; ಜೊತೆಗೆ ಅಕ್ಷರಸ್ಥ. ಊರನ್ನೇ ಬೆದರಿಕೆಯಲ್ಲಿಟ್ಟಿದ್ದ ಗೌಡರೂ ಗಂಗಾರಾಮನಲ್ಲಿ ವಿನಯವಾಗಿ ಮಾತನಾಡುತ್ತ ಅವನಿಂದ ಏನಾದರೂ ಓದಿಸುತ್ತಲೋ, ಬರೆಸುತ್ತಲೋ ಇದ್ದರು. ಇದನ್ನು ಕಂಡ ಚೆನ್ನಿ ಹೆಮ್ಮೆಯಿಂದ ಹಿಗ್ಗಿಹೋಗುತ್ತಿದ್ದಳು.

ಚೆನ್ನಿಗೆ ವಯಸ್ಸಾಗಲು ನೆರೆಹಳ್ಳಿಯ ಗೌಡನು ಅವಳನ್ನು ಮದುವೆಯಾಗುವ ಉದ್ದೇಶದಿಂದ ಮಾತುಕತೆ ನಡೆಸುತ್ತಿದ್ದನು. ಗೌಡನಿಗೆ ಆಗಲೇ ಎರಡು ಸಲ ಮದುವೆಯಾಗಿ ಅವರಿಬ್ಬರೂ ತೀರಿಹೋಗಿದ್ದರು. ಅವನ ಇಬ್ಬರು ಹೆಣ್ಣುಮಕ್ಕಳೂ ಮದುವೆಯಾಗಿ ಬೇರೆ ಹೊರಟುಹೋದ ಮೇಲೆ, ಗೌಡ ಪುನಃ ಮದುವೆಯಾಗಲು ಮನಸ್ಸುಮಾಡಿ,' ನೋಡಲು ಕೆಂಪಗೆ ಚೆನ್ನಾಗಿದ್ದ ಚೆನ್ನಿಯ ಮೇಲೆ ಕಣ್ಣು ಹಾಕಿದ್ದ. ಚೆನ್ನಿಯ ತಂದೆಯೂ ಗೌಡನ ಆಸ್ತಿಯನ್ನು ಮಾತ್ರ ನೋಡಿ ಅವನ ವಯಸ್ಸನ್ನು ಗಣಿಸದೆ ಮಗಳನ್ನು ಅವನಿಗೆ ಕೊಡಲು ನಿಶ್ಚಯಿಸಿದ್ದ. ಚೆನ್ನಿ ತಂದೆಗೆ ಎಷ್ಟು ಹೇಳಿಕೊಂಡರೂ ಅವನು ಮನಸ್ಸು ಬದಲಾಯಿಸದಿರಲು, ಅವಳು ಒಂದು ರಾತ್ರೆ ಹುಟ್ಟಿದ ಮನೆಯನ್ನೂ ಬಂಧುಬಳಗವೆಲ್ಲವನ್ನೂ ತೊರೆದು ಗಂಗಾರಾಮನೊಡನೆ ಹೊರಟು ಇಲ್ಲಿಗೆ ಬಂದಿದ್ದಳು.

ಗಂಗಾರಾಮ ಅವಳನ್ನು ಮದುವೆಯಾಗಿ ಗೌಡರ ಬಳಿ ಇದ್ದಾಗ ತಾನು

ಕೂಡಿ ಹಾಕಿದ್ದ ಹಣದಿಂದ ಒಂದು ಗುಡಿಸಿಲನ್ನು ಹಾಕಿಕೊಂಡು ಸಂಸಾರ ವನ್ನು ಆರಂಭಿಸಿದ. ಈ ವರ್ತಮಾನ ಕೇಳಿ ಗೌಡರು ಕಿಡಿಕಿಡಿಯಾಗಿ, 'ಆ ಹೆಣ್ಣು ತಮ್ಮ ಭಾಗಕ್ಕೆ ಸತ್ತಂತೆಯೂ, ತಮ್ಮಿಂದ ಅವಳಿಗೆ ಮುಂದೆ ಯಾವ ಭಾಗದಲ್ಲೂ ' ಏನು ಸಹಾಯವೂ ಆಗಲಾರದೆಂದು' ಹೇಳಿ ಕಳು ಹಿಸಿದರು.

ಮೊದಮೊದಲು ಜೀವನಕ್ಕೆ ಯಾವ ಮಾರ್ಗವೂ ದೊರೆಯದೆ ಚೆನ್ನಿಯ ಮೈಮೇಲಿದ್ದ ಚೂರುಪಾರು ನಗಗಳನ್ನೆಲ್ಲಾ ಮಾರಿಕೊಳ್ಳಬೇಕಾಗಿ ಬಂದದ್ದ ರಿಂದ, ಭೂಮಿಯನ್ನು ಕೊಂಡು ಆರಂಭ ಮಾಡಬೇಕೆಂದಿದ್ದ ಅವನ ಆಶೆ ಬಯಲಾಯಿತು. ಕೊನೆಗೆ ವಿಧಿಯಿಲ್ಲದೆ ಗಂಗಾರಾಮ ಜಮಾಸ್ದಾರ್ ರಘುನಾಥರಾಯರ ಬಳಿ ಊಳಿಗಕ್ಕೆ ಸೇರಿದ.

೨

ಆ ದಿನ ರಾಯರ ಮನೆಯಲ್ಲಿ ಬಹಳ ಗದ್ದಲ. ಗಂಗಾರಾಮ ಅಲ್ಲಿಗೆ ಹೋದ ಕೂಡಲೇ ರಾಯರು, "ಯಾಕೋ ಇಷ್ಟು ಹೊತ್ತಾಯಿತು? ನಾಳೆ ಮನೆಯಲ್ಲಿ ಔತಣಕೂಟ. ಈಗಲೇ ಈ ಇನ್ವಿಟೇಷನ್‌ಗಳನ್ನೆಲ್ಲಾ ನನ್ನ ಸ್ನೇಹಿತರುಗಳಿಗೆ ತಲಪಿಸಿಬಿಡು" ಎಂದು ಮೇಜಿನ ಮೇಲೆ ರಾಶಿಯಾಗಿ ಬಿದ್ದಿದ್ದ ಕಾಗದಗಳನ್ನು ತೋರಿಸಿದರು. ಕರಣೀಕನು ಎಲ್ಲಕ್ಕೂ ಮೇಲ್ವಿಳಾಸ ವನ್ನು ಬರೆಯುತ್ತ ತಲೆ ಬಗ್ಗಿಸಿಕೊಂಡು ಕುಳಿತಿದ್ದನು.

ಗಂಗಾರಾಮನ ಮುಖ ಇಳಿದುಹೋಯಿತು. ರಾಯರ ಮನೆ 'ಪಾರ್ಟಿ' ಗಳೆಂದರೆ ಅವನಿಗೆ ಗೊತ್ತು! ಎರಡು ದಿವಸ ಅವನಿಗೆ ತಲೆ ತುರಿಸುವುದಕ್ಕೂ ಹೊತ್ತಿರುವುದಿಲ್ಲ. ಈಗ ರಜ ಕೇಳುವುದು ಹೇಗೆ? ಗಂಗಾರಾಮನ ಕೆಲಸ ಸರದಿಯ ಮೇಲೆ ಮಾಡತಕ್ಕದ್ದು. ಎರಡು ದಿನದ ಸರದಿ. ಮೂರನೇ ದಿನ ಬೆಳಗ್ಗೆ ಮನೆಗೆ ಹೋದರೆ ಇನ್ನು ಎರಡು ದಿನ ಬರುವಂತಿಲ್ಲ. ಹೀಗೆ ಅವನು ಹಿಂದಿನ ಸರದಿ ಮುಗಿದು ಮನೆಗೆ ಹೋದಾಗ ಈ ಔತಣದ ವಿಚಾರವೇ ಇರಲಿಲ್ಲ. ಇದ್ದಕ್ಕಿದ್ದಂತೆ ರಾಯರು ಈ ಭಾರಿ ಏರ್ಪಾಡು ಮಾಡಿದ್ದರು.

ಗಂಗಾರಾಮ ಕಾಗದದ ಕಟ್ಟನ್ನು ತೆಗೆದುಕೊಂಡು ಹೊರಟ. 'ಇನ್ನೂ

ನಾಳೆಯವರೆಗೂ ಪುರುಸೊತ್ತಿದೆಯಲ್ಲಾ! ಅವರು ಮೆಚ್ಚುವಂತೆ ಕೆಲಸ ಮಾಡಿ ಅವರು ಸಂತೋಷವಾಗಿದ್ದಾಗ ಕೇಳುವುದು' ಎಂದುಕೊಂಡ. ಕೆಲಸ ವೇನೋ ಒಂದೊಂದಾಗಿ ಮುಗಿಯುತ್ತ ಬಂತು. ಆದರೂ ಅವನಿಗೆ ರಾಯರನ್ನು ಕೇಳುವ ಧೈರ್ಯ ಬರಲೊಲ್ಲದು. ಅವರ ಹತ್ತಿರ ಬಂದು ಮುಖ ನೋಡಿದ ಕೂಡಲೇ ಏನೋ ಒಂದು ತರಹ ಹೆದರಿಕೆ ಆಗಿಬಿಡುತ್ತಿತ್ತು. ಹೀಗೆ ದಿನವೆಲ್ಲಾ ಕಳೆಯಿತು. ರಾತ್ರಿ ಎಲ್ಲರೂ ಮಲಗಿದ ಮೇಲೆ ಗಂಗಾರಾಮ ಬಾಗಿಲ ಬಳಿ ಮಲಗಿಕೊಂಡು ದೈನ್ಯದಿಂದ, ನಕ್ಷತ್ರಗಳಿಂದ ತುಂಬಿದ ಆಕಾಶ ವನ್ನೇ ನೋಡುತ್ತಿದ್ದ.

ಬೆಳಗಾಯಿತು. ಮನೆಯಲ್ಲಿ ಎಲ್ಲಾ ಚಟುವಟಿಕೆಗಳೂ ಪುನಃ ಶುರು ವಾದವು. ಬೆಳಗಿನ ಉಪಾಹಾರವಾದ ಮೇಲೆ ರಾಯರು ಹಣ್ಣುಹಂಪಲು ಗಳನ್ನು ತರಲು ಕಾರಿನಲ್ಲಿ ಹೊರಗೆ ಹೋದರು.

ಒಳಗಡೆ ತ್ರಿವೇಣಿಯು ಮನೆಯನ್ನು ಶೃಂಗರಿಸುತ್ತಿದ್ದಳು. ಅವಳು ಹೆಸರಾಂತ ಗೃಹಿಣಿ. ಅತಿಥಿಗಳನ್ನು ಸತ್ಕರಿಸಿ ಅವರ ಮಾನಸ್ಸಂತೋಷಪಡಿಸು ವುದರಲ್ಲಿ ಅವಳನ್ನು ಮೀರಿಸಿದವರಾರೂ ಇರಲಿಲ್ಲ. ಅವರ ಮನೆಯ ಊಟ ತಿಂಡಿಗಳೆಂದರೆ ಜನರು ಬಹಳ ಉತ್ಸಾಹ ಉಲ್ಲಾಸಗಳಿಂದ ನೆರೆಯುತ್ತಿದ್ದರು.

ಗಂಗಾರಾಮ ಇತರ ಕೆಲಸಗಳನ್ನೆಲ್ಲಾ ಮುಗಿಸಿ ದಿವಾನಖಾನೆಯನ್ನು ಶುಭ್ರಗೊಳಿಸಲು ಹೋದ. ಆ ಕೆಲಸವನ್ನು ಮಾತ್ರ ತ್ರೀವೇಣಿಯು ಕೆಲಸದಲ್ಲಿ ನುರಿತ ಗಂಗಾರಾಮನಿಗೂ ವಹಿಸುತ್ತಿರಲಿಲ್ಲ. ಪ್ರತಿ ದಿನವೂ ತಾನೇ ಎದುರಿಗೆ ನಿಂತು ಅವನಿಂದ ಮಾಡಿಸುತ್ತಿದ್ದಳು. ಅದು ಕೇವಲ ದಿವಾನಖಾನೆಯಾಗಿರದೆ, ಒಂದು ಸುಂದರ ಕಲಾಮಂದಿರವೂ ಆಗಿತ್ತು. ಹಣ ಸುರಿದುಕೊಳ್ಳಬಹುದಾದ ಸಕಲಸುಂದರ ವಸ್ತುಗಳೂ, ದೇಶವಿದೇಶಗಳಿಂದ ತರಿಸಿದ ಅಪೂರ್ವ ಸಾಮಗ್ರಿ ಗಳೂ, ಪ್ರಸಿದ್ಧ ಕಲಾವಿದರ ಕಲಾಕೃತಿಗಳೂ, ದೊಡ್ಡ ದೊಡ್ಡ ತೈಲಚಿತ್ರ ಗಳೂ ಅಲ್ಲಿ ಶೇಖರವಾಗಿ ಮನೆಯನ್ನು ಅಲಂಕರಿಸಿದ್ದುವು.

ಈ ಸಲದ ಹೆಚ್ಚುಗಾರಿಕೆಯೆಂದರೆ ಹೊಸದಾಗಿ ಕೊಂಡಿದ್ದ ಎರಡು ಚಿತ್ರಗಳು. ಕಲಾಪ್ರದರ್ಶನದಲ್ಲಿ ಅವೆರಡೂ ಸ್ವರ್ಣಪದಕವನ್ನು ಪಡೆದಿದ್ದುವು ತ್ರಿವೇಣಿ ಬಹು ಪ್ರಯಾಸಪಟ್ಟು ಅವನ್ನು ಸಂಪಾದಿಸಿದ್ದಳು. ಅವಳು ಹುಟ್ಟು

ಕಲಾವಿದೆ. ಜಮೀನ್ದಾರ್ ರಘುನಾಥರಾಯರ ಕೈಹಿಡಿದ ಮೇಲೆ ಬಹಳ ಹಣ ಖರ್ಚುಮಾಡಿ ಒಳ್ಳೆಯ ಶಿಕ್ಷಣವನ್ನು ಪಡೆದು ಅದನ್ನು ಇನ್ನೂ ಅಭಿವೃದ್ಧಿ ಪಡಿಸಿಕೊಂಡಿದ್ದಳು. ಪ್ರದರ್ಶನಶಾಲೆಯಲ್ಲಿ ಆ ಚಿತ್ರಗಳನ್ನು ನೋಡಿದ ಕೂಡಲೇ ತ್ರಿವೇಣಿಗೆ ಅವನ್ನು ಸಂಗ್ರಹಿಸುವ ಆಸೆಯಾಯಿತು. ಯಾರ ಮೂಲಕವೋ ವಿಚಾರಿಸಲು. ಕಲಾವಿದ ಸುಂದರಮೂರ್ತಿ ಅವನ್ನು ಮಾರುವು ದಿಲ್ಲವೆಂದು ಹೇಳಿಬಿಟ್ಟ. ಆದರೂ ತ್ರಿವೇಣಿ ಅದರ ಆಸೆ ಬಿಡಲಿಲ್ಲ. ಯಜ ಮಾನರಿಗೆ ಹೇಳಿ ಅವನನ್ನು ತಮ್ಮ ಮನೆಗೆ 'ಟೀ'ಗಾಗಿ ಆಹ್ವಾನಿಸಿದಳು. ಸುಂದರಮೂರ್ತಿಗೆ ಹೋಗುವ ಇಷ್ಟವಿಲ್ಲದಿದ್ದರೂ ರಾಯರ ಮನೆಯಲ್ಲಿ ಅಪೂರ್ವ ಚಿತ್ರಸಂಗ್ರಹವಿದೆಯೆಂಬುವನ್ನು ಕೇಳಿದ್ದರಿಂದ, ಅದನ್ನು ನೋಡುವ ಕುತೂಹಲದಿಂದ ಬಂದ. ಬಾಗಿಲಲ್ಲೇ ರಾಯರೂ ತ್ರಿವೇಣಿಯೂ ಅವನನ್ನು ಆದರದಿಂದ ಸ್ವಾಗತಿಸಿ ಒಳಗೆ ಕರೆದುಕೊಂಡು ಹೋದರು. ಅಲ್ಲಿದ್ದ ಚಿತ್ರ ಗಳನ್ನು ನೋಡಿ ಸುಂದರಮೂರ್ತಿ ಬೆರಗಾದ. ಅವುಗಳಲ್ಲಿ ತ್ರಿವೇಣಿಯೇ ಬರೆದ 'ಶ್ಯಾಮಸುಂದರ,' 'ವಿರಹ,' ಈ ಎರಡು ಚಿತ್ರಗಳೂ ಅವನ ಹೃದಯವನ್ನು ಸೂರೆಗೊಂಡವು. ಸುಂದರಮೂರ್ತಿ ಮಾತಿಲ್ಲದೆ ಅವನ್ನು ನೋಡುತ್ತ ತನ್ನನ್ನೇ ಮರೆತವನಂತೆ ಕುಳಿತಿದ್ದುದನ್ನು ನೋಡಿ ತ್ರಿವೇಣಿ, "ಅವು ಹೇಗಿವೆ?" ಎಂದು ಪ್ರಶ್ನಿಸಿದಳು.

ಸುಂದರಮೂರ್ತಿಯ ಹೃದಯ ಉದಾರವಾದುದು. ಅದರಲ್ಲಿ ಅಲ್ಪ ಭಾವನೆಗಳಿಗೂ ಹೊಟ್ಟೆಕಿಚ್ಚಿಗೂ ಎಡೆಯಿರಲಿಲ್ಲ. "ಈ ಚಿತ್ರಗಳು ಪ್ರದರ್ಶ ನಕ್ಕೆ ಬರದೆ ಮರೆಯಲ್ಲೇ ಉಳಿದಿರುವುದರಿಂದಲೇ, ನಮ್ಮಂತಹವರ ಕೃತಿಗಳು ಪದಕವನ್ನು ಕಾಣುತ್ತಿರುವುದು" ಎಂದು ಮುಕ್ತಕಂಠದಿಂದ ಹೊಗಳಿ, ಮನೆಗೆ ಹೋದ ಕೂಡಲೇ ಆ ತನ್ನ ಚಿತ್ರಗಳನ್ನು 'ಕಾಣಿಕೆ' ಎಂದು ತ್ರಿವೇಣಿಗೆ ಕಳುಹಿಸಿದ. ಆದರೆ ರಾಯರು ಅದನ್ನು ಕಾಣಿಕೆಯಾಗಿ ಸ್ವೀಕರಿಸದೆ ಅದನ್ನು ತಂದವನ ಸಂಗಡಲೇ ಸಾವಿರ ರೂಪಾಯಿಗಳನ್ನು ಕಳುಹಿಸಿ ಕೊಟ್ಟರು.

ಇಷ್ಟು ದುಡ್ಡು ಸುರಿದು ಪಡೆದ ಚಿತ್ರ! ಅದಕ್ಕಾಗಿಯೇ ತ್ರಿವೇಣಿ ಅದರ ವಿಷಯದಲ್ಲಿ ಅಷ್ಟು ಮುತುವರ್ಜಿ ವಹಿಸಿ ಇಂದು ತಾನೇ ಅವನ್ನು ಒರೆಸುತ್ತ ಅಭಿಮಾನದಿಂದ ಅದರ ಕಡೆ ನೋಡುತ್ತಿದ್ದಳು. ಎರಡು ಚಿತ್ರಗಳೂ ಒಬ್ಬನೇ

ವ್ಯಕ್ತಿಯ ಜೀವನವನ್ನು ಕುರಿತು ಬರೆದುವಾಗಿದ್ದುವು. ಮೊದಲನೆಯದರಲ್ಲಿ ಆತನು ಇನ್ನೂ ತರುಣ. ಜೀವನ ಆಗತಾನೇ ಮೊದಲಾಗುತ್ತಿದೆ. ದೊಡ್ಡ ದಾಗಿ ಅರಮನೆಯಂತಿರುವ ಮನೆಯ ಮುಂದೆ ನಿಂತು ಒಳಗಿರುವ ಯಜ ಮಾನನ ಸಹಾಯದಿಂದ ತನ್ನ ಮುಂದಿನ ಬದುಕನ್ನು ಹವಣಿಸಿಕೊಳ್ಳಲು ಕಾದಿದ್ದಾನೆ. ಆಗಲೇ ಅವನ ಮನಸ್ಸಿನಲ್ಲಿ ಸುಖದ ಕಲ್ಪನೆಗಳು' ಕಣ್ಣುಗಳಲ್ಲಿ ಆಶೆಯು ಮಿಂಚುತ್ತಿದೆ! ಚಿತ್ರ ಬಹಳ ಸುಂದರವಾಗಿತ್ತು. ಆದರ ಹೆಸರು "ನಿರೀಕ್ಷೆ."

ಮತ್ತೊಂದರಲ್ಲಿ ಜೀವನದ ಸಮಸ್ಯೆಯು ಕಠಿಣವಾಗಿ, ಮೊದಲಿನ ಬಯಕೆಯು ಬಯಲಾಗಲು, ಯಂತ್ರದ ಜೊತೆಗೆ ಯಂತ್ರವಾಗಿ ದುಡಿಯುವ ಇಳಿವಯಸ್ಸಿನ ಮನುಷ್ಯ. ಅವನಿಗೆ ಯಾವುದರಲ್ಲೂ ನಂಬಿಕೆಯಿಲ್ಲ! 'ಅನ್ನದೇವ'ನೊಬ್ಬನನ್ನೇ ಅವನು ಕಾಡಿರುವುದು. ಅದನ್ನು ಪಡೆಯುವುದ ಕ್ಕಾಗಿ ಏನು ಮಾಡುವುದಕ್ಕೂ ಹೇಸುವುದಿಲ್ಲ! ಪಾಪಪುಣ್ಯಗಳ ಭಯವಿಲ್ಲ! ಮನುಷ್ಯತ್ವವು ಮಾಯವಾಗಿದೆ! ಜೊತೆಗೆ ದುಡಿತದ ಕಷ್ಟವನ್ನು ಹಗುರ ಮಾಡಲು ಕುಡಿತ ಬೇರೆ! ಅಮಲೇರಿದ ಕಣ್ಣುಗಳು! ತುಟಿಗಳ ಮೇಲೆ ಪ್ರಪಂಚವನ್ನೇ ಧಿಕ್ಕರಿಸುವಂತಿರುವ ನಗು! ಎಂತಹ ಚಿತ್ರ!! ಹೆಸರು "ನಿರಾಶೆ." ನಿರಾಶೆಯೇ ಮೂರ್ತಿವೆತ್ತು ನಿಂತಂತೆ ತೋರುತ್ತಿತ್ತು. ಒಬ್ಬನೇ ಮನುಷ್ಯ ಪ್ರಪಂಚದ ಅನ್ಯಾಯದ ಸುಳಿಗೆ ಸಿಕ್ಕಿ ಎಷ್ಟು ಬದಲಾಯಿಸಿಬಿಡು ತ್ತಾನೆ! ಅಂದಿನ ಅವನ ಆದರ್ಶವೆಲ್ಲಿ? ಇಂದಿನ ಸ್ಥಿತಿಯೆಲ್ಲಿ! ಪರಮಾತ್ಮನ ಸೃಷ್ಟಿಯಲ್ಲಿ ಎಲ್ಲರೂ ಒಂದೇ ಅಲ್ಲವೇ? ಆದರೆ ಮಾನವನೇಕೆ ಈ ಅಂತರ ವನ್ನು ಬೆಳೆಸುತ್ತಾ ಹೋಗುತ್ತಾನೆ? ಎಂದು ನೋಡಿದವರೆಲ್ಲರನ್ನೂ ಪ್ರಶ್ನಿಸು ವಂತಿತ್ತು ಆ ಚಿತ್ರ. ತ್ರಿವೇಣಿ ಅದರ ಸೊಬಗನ್ನೂ, ಚಿತ್ರಿಸಿರುವ ವೈಖರಿ ಯನ್ನೂ, ಭಾವಗಳು ಮೇಲೆದ್ದು ತೋರುವಂತೆ ಇದ್ದ ವರ್ಣಗಳ ವೈವಿಧ್ಯ ವನ್ನೂ, ಅದಕ್ಕೊಪ್ಪುವ ಹಿನ್ನೆಲೆಯ ಸೌಂದರ್ಯವನ್ನೂ ನೋಡಿ ಮೆಚ್ಚು ತ್ತಿದ್ದಳೇ ಹೊರತು ಅದರ ಹಿಂದೆ ಅಡಗಿದ್ದ ಉದ್ದೇಶ ಅವಳ ಮನಸ್ಸಿಗೆ ಹಿಡಿಸಲಿಲ್ಲ ಅಥವಾ ತಿಳಿದುಕೊಳ್ಳಲು ಇಷ್ಟಪಡಲಿಲ್ಲ. ಅನೇಕರನ್ನು ಕ್ಷಣ ಮಾತ್ರವಾದರೂ ಯೋಚನಾಪರರನ್ನಾಗಿ ಮಾಡಿದ ಚಿತ್ರವು ಅವಳ ಮನಸ್ಸಿನ

ಮೇಲೆ ಯಾವ ಪರಿಣಾಮವನ್ನೂ ಮಾಡದಾಯಿತು. ಅವಳು ನಗುತ್ತ ಅದರ ಬಾಹ್ಯಸೌಂದರ್ಯವನ್ನು ಅವಲೋಕಿಸುತ್ತಿದ್ದಳು.

ಗಂಗಾರಾಮ ಸಮಯ ಸಾಧಿಸಿ ರಜ ಕೇಳಿದ. ತ್ರಿವೇಣಿ ಬೆಚ್ಚಿ, "ಇದೇನು ಗಂಗಾರಾಮ್! ಈ ದಿನ ರಜ ಕೇಳಲು ನಿನಗೆ ಬಾಯಿಯಾದರೂ ಹೇಗೆ ಬಂತು? ಯಜಮಾನರು ಏನನ್ನುವರು?" ಎಂದಳು. ಗಂಗಾರಾಮ ಪುನಃ ಪುನಃ ಬೇಡಿದ. ಹರಕೆ ಸಲ್ಲಿಸದಿದ್ದರೆ ದೇವರಿಗೆ ಕೋಪ ಬಂದು ಮಗುವಿಗೆ ಕೇಡುಂಟಾಗುವದೆಂದು ಗೋಗರೆದ. ತ್ರಿವೇಣಿ ಕೊನೆಗೆ ದೊಡ್ಡ ಮನಸ್ಸುಮಾಡಿ, ಆಗಲೇ ಕಳುಹಿಸಲು ಸಾಧ್ಯವಿಲ್ಲವೆಂದೂ, ಸಾಯಂಕಾಲ ಅತಿಥಿಗಳೆಲ್ಲಾ ಬಂದಮೇಲೆ ಹೋಗಬಹುದೆಂದೂ ಅಪ್ಪಣೆ ಕೊಟ್ಟು, "ಹಬ್ಬ ನಾಳೆ ಮಾಡಬಾರದೆ? ಗಂಗಾರಾಮ್? ಎಲ್ಲರದೂ ಊಟವಾದ ಮೇಲೆ ಏನಾದರೂ ಮಿಕ್ಕಿದ್ದ ತಿಂಡಿಯನ್ನು ಕೊಡುತ್ತಿದ್ದೆ" ಎಂದಳು. ಗಂಗಾರಾಮ ಏನೂ ಹೇಳದೆ ಖಿನ್ನನಾಗಿ ತಲೆ ಬಗ್ಗಿಸಿಕೊಂಡು ತನ್ನ ಕೆಲಸವನ್ನು ಮಾಡ ತೊಡಗಿದ.

೩

ಗಂಗಾರಾಮ ರಾಯರ ಮನೆಯಿಂದ ಹೊರಟಾಗಲೇ ಸಂಜೆಯಾಗಿತ್ತು. ಆ ದಿನ ಅವನ ಮನಸ್ಸಿಗೆ ಬಹಳ ಬೇಸರವಾಗಿತ್ತು. ಯಾವುದರಲ್ಲೂ ಉತ್ಸಾಹವಿರಲಿಲ್ಲ. ನಿಧಾನವಾಗಿ ಕಾಲೆಳೆದುಕೊಂಡು ಮನೆಯ ಕಡೆ ಹೋಗುತ್ತಿದ್ದ. ಎಂದಿನಂತೆ ಸಂಜೆಯ ಬೆಡಗೂ, ಹಕ್ಕಿಗಳು ಗೂಡು ಸೇರುತ್ತಿದ್ದ ಸಡಗರವೂ ಅವನ ಮನಸ್ಸನ್ನು ಸೆಳೆಯಲಿಲ್ಲ. ಅದನ್ನೇ ನೋಡುತ್ತ ಮೈಮರೆತು ನಿಲ್ಲುತ್ತಿದ್ದವನು ಇಂದು ಆಕಡೆ ತಿರುಗಿಯೂ ನೋಡದೆ ಮುಂದೆ ಸಾಗಿದ್ದ. 'ಸಿರಿವಂತರಿಗೆ ನಮ್ಮ ಕಷ್ಟಸುಖಗಳ ನೆರಳೂ ಗೊತ್ತಾಗುದಿಲ್ಲವಲ್ಲ. ಅವರು ತಿಳಿಯಲು ಅಪೇಕ್ಷಿಸುವುದೂ ಇಲ್ಲ. ಆದರೂ ಒಂದು ಗಳಿಗೆಯೂ ನಾವಿಲ್ಲದೆ ಅವರಿಗೆ ನಡೆಯುವಂತಿಲ್ಲ! ಅವರನ್ನು ಬಿಟ್ಟರೆ ನಮಗೂ ಗತಿಯಿಲ್ಲ! ನಮ್ಮಿಬ್ಬರ ನಡುವೆ ಈ ಅಂತರವೇಕೆ?' ಎಂದು ಯೋಚಿಸುತ್ತಿದ್ದ. ಅದು ಬಹಳ ತೊಡಕಾದ ಪ್ರಶ್ನೆ! ಅವನ ಕಲಕಿದ ಮನಸ್ಸಿಗೆ ಯಾವ ಉತ್ತರವೂ ಹೊಳೆಯಲಿಲ್ಲ.

ದಾರಿಯಲ್ಲಿ ಅವನ ನೆರೆಹೊರೆಯವರು ಗುಡಿಯಿಂದ ಹಿಂದಿರುಗುತ್ತಿದ್ದರು. ಹೆಂಗಸರು ಹೊಸ ಸೀರೆಗಳನ್ನುಟ್ಟು ತಲೆಯಮೇಲೆ ತಂಬಿಟ್ಟಿನ ಆರತಿಯನ್ನು ಇಟ್ಟುಕೊಂಡು ನಗುನಗುತ್ತ ಗಟ್ಟಿಯಾಗಿ ಮಾತಾಡುತ್ತ ಮುಂದೆ ಹೋಗುತ್ತಿದ್ದರು. ಅವರೆಲ್ಲರೂ ತಕ್ಕಮಟ್ಟಿಗೆ ಭೂಮಿಕಾಣಿ ಉಳ್ಳವರು; ಕೇವಲ ಮತ್ತೊಬ್ಬರು ಕೊಡುವ ಹಣವನ್ನೇ ನೆಚ್ಚಿಕೊಂಡಿದ್ದವರಲ್ಲ. ಅವರನ್ನು ನೋಡಿದ ಕೂಡಲೇ ಅವನಿಗೆ ಚೆನ್ನಿಯ ನೆನಪಾಯಿತು. 'ಚೆನ್ನಿ ಬೆಳಗಿನಿಂದಲೂ ನನಗಾಗಿ ಕಾಮು ಕಾದು ಎಷ್ಟು ಬೇಸರಪಟ್ಟಿರುವಳೋ? ಈಗಲೂ ಮಗುವನ್ನೆತ್ತಿಕೊಂಡು ನಾನು ಬರುವುದನ್ನೇ ನಿರೀಕ್ಷಿಸುತ್ತಾ ಬಾಗಿಲಲ್ಲಿ ನಿಂತಿರಬಹುದು. ನೆರೆಯವರೆಲ್ಲರೂ ಸಂಭ್ರಮದಿಂದ ಹಬ್ಬ ಮಾಡುತ್ತಿರುವುದನ್ನು ನೋಡಿ ಚೆನ್ನಿ ಹಬ್ಬ ಹೋಗಲಿ, ತನ್ನ ಹರಕೆಯನ್ನು ಸಲ್ಲಿಸಲು ಆಗಲಿಲ್ಲವಲ್ಲ ಎಂದು ಈ ದಿನ ಕಣ್ಣೀರು ಹಾಕಿರಬೇಕು. ನಿಜವಾಗಿಯೂ ಅವಳಿಗೆ ಈ ದಿನ ನನ್ನನ್ನು ಮದುವೆಯಾದದ್ದಕ್ಕಾಗಿ ತುಂಬಾ ವ್ಯಸನವಾಗಿರಬಹುದು' ಎಂದುಕೊಂಡ. ಚೆನ್ನಿಯ ಸ್ವಭಾವವನ್ನೂ, ಅವಳ ಪ್ರೇಮದ ಆಳವನ್ನೂ ತಿಳಿದಿದ್ದರೂ ಅವನಿಂದ ಇಂಥಾ ಯೋಚನೆಯನ್ನು ದೂರಮಾಡುವುದು ಸಾಧ್ಯವಾಗಲಿಲ್ಲ. ಅದು ಅವನ ಹೃದಯವನ್ನು ಇರಿಯುತ್ತಿತ್ತು. 'ಚೆನ್ನಿ ಎಂದಿಗೂ ಹಾಗೆ ಅಂದುಕೊಳ್ಳದಂತೆ ನಡೆದುಕೊಂಡು ನನ್ನ ಸ್ಥಿತಿಯನ್ನು ಉತ್ತಮಗೊಳಿಸಿಕೊಳ್ಳುತ್ತೇನೆ' ಎಂದು ಗಂಗಾರಾಮ ಮದುವೆಯಾದ ತರುಣದಲ್ಲಿ ಪ್ರತಿಜ್ಞೆ ಮಾಡಿಕೊಂಡಿದ್ದ. ಈ ದಿನ ಆ 'ಪ್ರತಿಜ್ಞೆ' ಅವನನ್ನು ಅಣಕಿಸುತ್ತಿರುವಂತೆ ತೋರಿ, ಜೀವಿಸಿರುವುದೇ ಬೇಸರವಾಗಿ ಕಂಡಿತು. ಮನೆಯು ಹತ್ತಿರವಾಗುತ್ತ ಬಂದಂತೆ ಚೆನ್ನಿಯ ಮೇಲಿನ ಕನಿಕರವು ಕಡಿಮೆಯಾಗಿ ಒಂದು ಬಗೆಯ ತಿರಸ್ಕಾರವು ತಲೆದೋರಲಾರಂಭಿಸಿತು. 'ಈ ಸಂಸಾರಕ್ಕಲ್ಲವೆ ಎಲ್ಲ ಕಷ್ಟ. ಈ ಕಾಠಿಣ್ಯವನ್ನು ಸಹಿಸಬೇಕಾಗಿರುವುದು! ಇವಳೂ ಆ ಮಗುವೂ ಕುತ್ತಿಗೆಗೆ ಗಂಟುಬೀಳದಿದ್ದರೆ ಎಂದೋ ಈ ಗುಲಾಮಗಿರಿಯನ್ನು ಕಿತ್ತೊಗೆದು ಸ್ವತಂತ್ರನಾಗಿ ಜೀವಿಸಬಹುದಾಗಿತ್ತು' ಎಂದುಕೊಂಡ.

ಆಹಾ! ಮಾನವನೆಂಥ ಕೃತಘ್ನ! ಆ ಗಳಿಗೆಯಲ್ಲಿ ಗಂಗಾರಾಮ ಚೆನ್ನಿಯಿಂದ ಪಡೆದ ಸುಖಸಂತೋಷಗಳೆಲ್ಲವನ್ನೂ ಮನಶ್ಶಾಂತಿಯನ್ನೂ ಮರೆತಿದ್ದ.

ದೂರದ ಗುಡಿಸಲುಗಳಿಂದ ಬರುತ್ತಿದ್ದ ಬೆಳಕು ಕಾಣಿಸಿತು. ಬರಬರುತ್ತ ಅಲ್ಲಲ್ಲೋ ಜೋಗುಳದ ಹಾಡೂ ಕೇಳಿಸಿತು. ಕೆಲವು ಮನೆಗಳಲ್ಲಿ ಹೆಂಗಸರು ಸಣ್ಣಗೆ ರಾಗವಾಗಿ ಹಾಡು ಹೇಳುತ್ತ ಬೀಸುತ್ತಿದ್ದರು. ಆದರೆ ...ಗಂಗಾರಾಮನ ಎದೆಯು ಧಸಕ್ಕೆಂದಿತು! ಅವನ ಗುಡಿಸಿಲಿನಲ್ಲಿ ದೀಪವಿಲ್ಲ! ಕತ್ತಲೆಯಲ್ಲಿ ಅದ್ದಿದ್ದಂತೆ ತೋರುತ್ತಿತ್ತು.

ಗಂಗಾರಾಮ ಓಡುತ್ತ ಗುಡಿಸಿಲಿನ ಬಳಿಗೆ ಬಂದು ಅಲ್ಲೇ ತಟಕ್ಕನೆ ನಿಂತು, "ಚೆನ್ನಿ" ಎಂದು ಕೂಗಿದ. ಚೆನ್ನಿ ಒಳಗಿನಿಂದ "ಆ" ಎಂದಳು. ಗಂಗಾರಾಮನಿಗೆ ಹೋಗಿದ್ದ ಜೀವ ಬಂದಂತಾಯಿತು. ಜೊತೆಗೆ ಕೋಪವೂ ಬಂತು. ಒಳಕ್ಕೆ ನುಗ್ಗಿ, "ದೀಪ ಹಚ್ಚುವುದಕ್ಕೆ ನಿಂಗೆ ಏನು ರೋಗ ಬಂದಿದೆ?" ಎಂದ.

ಚೆನ್ನಿ ನಡುಗಿದಳು. ಅವಳು ಅವನಿಂದ ಈ ಬಗೆಯ ಮಾತನ್ನು ಹಿಂದೆ ಎಂದೂ ಕೇಳಿರಲಿಲ್ಲ. ಆ ಕತ್ತಲೆಯಲ್ಲೂ ಅವನನ್ನೇ ನೋಡುವಂತೆ ತಲೆಯೆತ್ತಿ, "ಎಣ್ಣೆ ಬತ್ತಿ ಯಾವುದೂ ಇಲ್ಲ; ಕೊನೆಗೊಂದು ಬೆಂಕಿಕಡ್ಡಿಯೂ ಸಹ ಇಲ್ಲ. ದೀಪ ಹ್ಯಾಗೆ ಹಚ್ಚಲಿ?" ಎಂದಳು.

ಗಂಗಾರಾಮ ಕಲ್ಲಿನಂತೆ ನಿಂತುಬಿಟ್ಟ. ಹಿಂದಿನ ದಿನ ಚೆನ್ನಿ, "ಮನೆಯಲ್ಲಿ ಏನೂ ಇಲ್ಲ" ಎಂದಾಗ—ಹಬ್ಬಕ್ಕೆ ಬೇಕಾಗುವ ಸಾಮಾನು ಮಾತ್ರ ಇಲ್ಲವೆಂದುಕೊಂಡಿದ್ದ. ಚೆನ್ನಿ ಎಂದೂ ಹಾಗೆ ಹೇಳಿ ಅವನ ಎದೆಯ ಭಾರವನ್ನು ಹೆಚ್ಚಿಸಿದವಳಲ್ಲ. ಆ ದಿನ ಅವಳ ಅಂಕೆಯನ್ನು ಮೀರಿ ಆ ಮಾತು ಹೊರ ಬಿದ್ದಿತು

"ಚೆನ್ನಿ, ಎಲ್ಲಾದರೂ ಒಂದಿಷ್ಟು ಎಣ್ಣೆ ಬತ್ತಿ, ಕಡ್ಡಿ ತಂದು ದೀಪ ಹಚ್ಚಬಾರದಾಗಿತ್ತ?"

"ಹ್ಯಾಗೆ ಹೋಗಲಿ? ನಿನ್ನೆಯಿಂದಲೂ ಮಗುವಿಗೆ ಪುನಃ ಜ್ವರ ಬಂದುಬಿಟ್ಟಿದೆ. ಸಂಜೆಯಿಂದಲೂ ಜ್ಞಾನವೇ ಇಲ್ಲದೆ ತೊಡೆ ಮೇಲೆ ಸೆಡೆತು ಕೊಂಡು ಬಿದ್ದಿದೆ! ಯಾರ ಬಳಿ ಬಿಟ್ಟು ಹೋಗಲಿ?"

ಗಂಗಾರಾಮನಿಗೆ ತಾನು ಮನೆ ಬಿಟ್ಟು ಹೋಗಿ ಬಂದ ಒಂದೂವರೆ ದಿವಸದಲ್ಲಿ ಏನಾಗಿದೆ ಎಂಬ ಅರಿವೇ ಇರಲಿಲ್ಲ. ನಿಜ; ಏನಾಗಬಾರದು?

ಮಗುವಿಗೆ ಆಲಸ್ಯವಾಗಲು ಚೆನ್ನಿ ತಾನು ಕೂಲಿನಾಲಿ ಮಾಡಿ ಸಂಪಾದಿಸಿದ್ದ ಒಪ್ಪೊತ್ತಿನ ಗಂಜಿಗಾಗುವಷ್ಟು ಹಿಟ್ಟನ್ನೂ, ಒಂದೆರಡು ಪುಡಿಗಾಸನ್ನೂ ಕಾಣಿಕೆ ತೆತ್ತು ಮಗುವಿಗೆ 'ಯಂತ್ರ' ಕಟ್ಟಿಸಿದ್ದಳು!

ಗಂಗಾರಾಮ ಪುನಃ "ಚೆನ್ನೀ, ಹೀಗೆ ಕುಂತಿರು. ಈಗಲೇ ಹೋಗಿ ಏನಾದರೂ ತರುತ್ತೇನೆ ..." ಎಂದ.

"ಈಗಲೇ ಏನೂಬೇಡ, ಈ ಕತ್ತಲೆಯಲ್ಲಿ ಎಲ್ಲಿಗೆ ಹೋಗುತ್ತೀ? ಬೆಳಗ್ಗೆ ನೋಡೋಣ!" ಎಂದಳು ಚೆನ್ನಿ.

ಗಂಗಾರಾಮ ಆ ದಿನ ಹುಚ್ಚನಂತೆ ಆಗಿದ್ದ. ಅವನ ಮನಸ್ಸು ಅವನ ಅಂಕೆಯಲ್ಲಿರಲಿಲ್ಲ. ಚೆನ್ನಿ ಕತ್ತಲಲ್ಲಿ ಕುಳಿತಿದ್ದಳು. ತಾನು ಏನೂ ತರದೆ ಸುಮ್ಮನೆ ಅವಳ ಬಳಿ ಕುಳಿತಿದ್ದರೂ, ಅವಳಿಗೆ ಎಷ್ಟು ಸಮಾಧಾನವಾಗುತ್ತೆಂದು ಅವನಿಗೆ ಗೊತ್ತಿದ್ದರೂ, ಅದು ಒಂದನ್ನೂ ಮನಸ್ಸಿಗೆ ತಂದುಕೊಳ್ಳದೆ ತಟಕ್ಕನೆ ಎದ್ದು ನಿಂತು, "ಚೆನ್ನಿ, ಹಾಗಾದರೆ ನಾನು ಇಲ್ಲೇ ಇದ್ದು ಏನು ಮಾಡಬೇಕು. ಅಲ್ಲೇ ಹೋಗುತ್ತೇನೆ. ರಾಯರು ಈ ದಿನ ರಜವೆಂದು ಬರೆದುಕೊಂಡು, ಇನ್ನೊಂದು ಸಲ ರಜ ಕೇಳಿದಾಗ "ಇದೇನೋ ಇನ್ನೂ ಮೊನ್ನೆ ರಜ ತೆಗೆದುಕೊಂಡಿದ್ದೆಯಲ್ಲೋ ಅಂತಾರೆ" ಎಂದು ಹೇಳಿ ಆಚೆ ಹೊರಟ.

ಕತ್ತಲೆಯಲ್ಲಿ ಚೆನ್ನಿಯ ಕಣ್ಣಿನಿಂದ ನೀರಿನ ಕೋಡಿ ಹರಿಯುತ್ತಿತ್ತು.

* * * *

ಗಂಗಾರಾಮ ಹಿಂದಿರುಗಿ ಬಂದಾಗ ರಾಯರ ಮನೆಯೆಲ್ಲವೂ ಬಣ್ಣಬಣ್ಣದ ದೀಪಗಳಿಂದ ಬೆಳಗುತ್ತಿತ್ತು. ಸ್ನೇಹಿತರೆಲ್ಲರೂ ಆಗತಾನೆ ಮನೆಗಳಿಗೆ ಹೋಗುತ್ತಿದ್ದರು. ತಿಂಡಿಯ ವಾಸನೆ, ಹೂವಿನ ಕಂಪು, ಗಂಧ-ಧೂಪಗಳ ಪರಿಮಳ, ಎಲ್ಲೆಡೆಯಲ್ಲೂ ಹರಡಿತ್ತು. ರಾಯರು ಬಾಗಿಲ ಬಳಿ ಆರಾಮ ಕುರ್ಚಿಯಲ್ಲಿ ಕುಳಿತು ಸಿಗರೇಟು ಸೇದುತ್ತ ಹೊಗೆಯು ಸುರಳಿ ಸುರಳಿಯಾಗಿ ಮೇಲೆ ಹೋಗುತ್ತಿರುವುದನ್ನು ನೋಡುತ್ತ ಸುಖಾನುಭವ ಪಡೆಯುತ್ತಿದ್ದರು. ಗಂಗಾರಾಮ ಹೋಗಿ ಕಂಬವನ್ನೊರಗಿಕೊಂಡು ನಿಂತ. ನೆರಳು ಬಿದ್ದುದನ್ನು ನೋಡಿ ರಾಯರು "ಯಾರೋ ಅದು?" ಎಂದರು.

ಗಂಗಾರಾಮ ದೀನವಾಣಿಯಿಂದ—

“ ನಶಿನ.

“ ಇದೇನೋ? ಹಬ್ಬ ಹರಕ ಎಂದು ರಜ ಕೇಳಿ ಹೋದೆಯಂತಲ್ಲೋ? ”

“ ಹೌದು ದೇವರು....ಕೇಳಿದ್ದೆ ಆ....ದ....ರೆ ಮನೆಯಲ್ಲಿ ಏನೇನೂ ಇರಲಿಲ್ಲ. ಹಬ್ಬ ಮಾಡಲಿಲ್ಲ. ಆದಕ್ಕೇ ಬಂದುಬಿಟ್ಟೆ ”

“ ಬಹಳ ಒಳ್ಳೆಯದಾಯಿತು! ಆ ತಟ್ಟೆ ಬಟ್ಟಲುಗಳನ್ನೆಲ್ಲಾ ಆ ಚಿಕ್ಕ ಹುಡುಗ ಹೇಗೆ ತೊಳೆದಾನು ಎಂದೇ ಯೋಚಿಸುತ್ತಿದ್ದೆ. ಅಲ್ಲದೆ ಎಲ್ಲಾ ಪಿಂಗಾಣಿ ಪಾತ್ರೆಗಳು. ಎಲ್ಲಿ ಒಡೆದುಹಾಕಿ ಬಿಡುತ್ತಾನೋ ಎಂದು ಭಯವಾಗಿತ್ತು. ಹೋಗು ಗಂಗಾರಾಮ್, ಅವನ್ನೆಲ್ಲಾ ಸರಿಯಾಗಿ ಒಳಗೆ ತೆಗೆದಿಡು” ಎಂದು ಹೇಳುತ್ತಾ ತಮ್ಮ ಸ್ನೇಹಿತರು ತಿಂದು ಹೆಚ್ಚಾಗಿ, ಚೆಲ್ಲಿ ರಾಶಿರಾಶಿಯಾಗಿ ತಟ್ಟೆಗಳಲ್ಲಿ ಬಿಟ್ಟಿದ್ದ ತಿಂಡಿಯ ಕಡೆ ಕೈ ತೋರಿಸಿದರು.

ಗಂಗಾರಾಮ ಯಂತ್ರದಂತೆ ಹೆಜ್ಜೆಹಾಕುತ್ತ ಅವರು ತೋರಿಸಿದ ಕಡೆ ಹೋದ. ಅಲ್ಲಿ ಕೆಲಸ ಮಾಡುತ್ತಿರುವಾಗ ಏನೋ ಕೇಳಿಸಿದಂತಾಗಲು ಅವನ ತಲೆ ತಿರುಗಲಾರಂಭಿಸಿತು!

ಆ ದಿನದ ‘ ಪಾರ್ಟಿ ’ ಬಹಳ ಯಶಸ್ವಿಯಾಗಿ ನಡೆದಿತ್ತು. ಬಂದವರೆಲ್ಲ ತ್ರಿವೇಣಿಯನ್ನು ಹೊಗಳಿ ಹೋದರು. ಯಜಮಾನಿಗೆ ಇದಕ್ಕಿಂತ ಏನು ಬೇಕು? ಆದರೂ ಅವಳಿಗೆ ಸಮಾಧಾನವಿರಲಿಲ್ಲ. ರಘುನಾಥರಾಯರು ಬಂದು ತಮ್ಮ ಮೆಚ್ಚುಗೆಯನ್ನು ತಿಳಿಸುವವರೆಗೆ! ಅವರಿಗಾಗಿ ಕಾಯುತ್ತಾ ಸಂತೋಷದ ಭರದಲ್ಲಿ ‘ ಶ್ಯಾಮಸುಂದರ ’ನ ಪಟದ ಎದುರಿಗೆ ನಿಂತು ತ್ರಿವೇಣಿ, ಮಧುರವಾಗಿ—

“ ರಾಧಾ ಮಾಧವಾ, ಜಯ ಜಯ
ರಾಧಾ ಮಾಧವಾ ”

ಎಂದು ಹಾಡುತ್ತಿದ್ದಳು.

---

# ದಿ ಯುನೈಟೆಡ್ ಕರ್ನಾಟಕ ಇನ್ಶೂರನ್ಸ ಕಂಪನಿ, ಲಿಮಿಟೆಡ್

ಮುಖ್ಯ ಕಾರ್ಯಾಲಯ : ಧಾರವಾಡ

ಭರದಿಂದ ಬೆಳೆಯುತ್ತಿರುವ ಉತ್ತರ ಕರ್ನಾಟಕದ ಪ್ರಥಮ ಸಂಸ್ಥೆ.

ಸರಕಾರದ ಆಧಾರ ಪತ್ರಗಳಲ್ಲಿ (Government Papers) ರೂ. ೧,೮೪,೪೦೦ ಗಳನ್ನು ತೊಡಗಿಸಿದೆ.

ಪಾಲಿಸಿದಾರರ ಜೀವ ವಿಮಾ ನಿಧಿ ರೂ. ೧,೫೯,೩೮೮.

ಮರಣ ಹೊಂದಿದವರ ವಾರಸದಾರರಿಗೆ ಸಲ್ಲಿಸಿದ ಹಕ್ಕಿನ ಹಣ ರೂ. ೩೧,೭೩೦—೮—೦

ಅವಧಿ ಮುಗಿದ ಪಾಲಿಸಿದಾರರಿಗೆ ಸಲ್ಲಿಸಿದ ಹಕ್ಕಿನ ಹಣ ರೂ. ೮,೮೦೭—೮—೦.

ಅಖಂಡ ಕರ್ನಾಟಕದ ಆದರಾಭಿಮಾನದ ಸಂಸ್ಥೆ

ಪ್ರತಿಯೊಬ್ಬ ಕನ್ನಡಿಗನು ಪಾಲಿಸಿಯನ್ನೂ ಪಾಲನ್ನೂ ಪಡೆಯಲು ಯೋಗ್ಯವಾದ ಸಂಸ್ಥೆ.

ಕಾರ್ಯಕುಶಲರಿಗೆ ಪೂರ್ಣಲಾಭ. ಏಜಂಟರಾಗಬಯಸುವವರು ಬರೆಯುವುದು.

ಮುಂಬಯಿ ಸಂಘಟನಾ ಕಚೇರಿ
೧೦, ಬಿಸ್ಮಿಲ್ಲಾ ಬಿಲ್ಡಿಂಗ
ಬಿ. ಬಿ. ಸಿ. ಆಯ್
ರೇಲ್ವೇಸ್ಟೇಶನದ ಎದುರು
ದಾದರ, ಮುಂಬಯಿ

**ಜಿ. ಆರ್. ನಲವಡಿ**
B A, L L B, M, LA
ಮ್ಯಾನೇಜಿಂಗ ಡಾಯರೆಕ್ಟರ

ಬಾ೦' 'ರು )